ಪುರೋಗಾಮಿ ಪ್ರಕಾಶನದ ನಾಲ್ಕನೆಯ ಪ್ರಕಟಣೆ

# ಕವಿ ಪುಂಗವ

ತೆಲುಗು ಮೂಲ:

ಆತ್ರೇಯ

ಅನುವಾದ:

ವಾಸುದೇವ

ಪುರೋಗಾಮಿ

ಪುರೋಗಾಮಿ ಪ್ರಕಾಶನ

ಬಸವನಗುಡಿ - ಬೆಂಗಳೂರು ೪

**ಪುರೋಗಾಮಿ ಪ್ರಕಾಶನ**

ಸಂಪಾದಕರು:
**ನಿರಂಜನ; ವಾಸುದೇವ**
ವಾರ್ಷಿಕ ಚಂದಾ ರೂ. ೬-೧೨-೦

ಪ್ರಕಾಶಕರು:
**ಕುಳುಕುಂದ ಶಿವರಾಯ**
ಪುರೋಗಾಮಿ ಪ್ರಕಾಶನ
೮೨, ನಾಗಸಂದ್ರ ರಸ್ತೆ
ಬಸವನಗುಡಿ, ಬೆಂಗಳೂರು ೪

ಮುಂಬಯಿ ಕಾರ್ಯಾಲಯ:
**ವಾಸುದೇವ**
೨೦, ದೌಲತ್ ಭವನ
೪೦೭, ಕಾಲ್ಬಾದೇವಿ, ಮುಂಬಯಿ ೨

ಮುದ್ರಕರು:
**ಬಿ. ಕೃಷ್ಣ**, ಬಿ.ಎ., ಬಿ.ಟಿ.
ಪಬ್ಲಿಷರ್ಸ್ ಅಂಡ್ ಅಡ್ವರ್ಟೈಸರ್ಸ್ ಲಿ.
ಚಾಮರಾಜಪೇಟೆ, ಬೆಂಗಳೂರು-೨

ಮಾರಾಟದ ಒಡೆತನ:
**ನ್ಯೂ ಬುಕ್ ಕಂಪೆನಿ**
೮೨, ನಾಗಸಂದ್ರ ರಸ್ತೆ
ಬಸವನಗುಡಿ, ಬೆಂಗಳೂರು ೪

ಚಿತ್ರಕಾರರು:
**ಆರ್. ಎಸ್. ಎನ್.**

ಬೆಲೆ: ರೂ. ೧-೦-೦



ಬರಲಿವೆ:

ಐದನೆಯ ಪ್ರಕಟಣೆ

ಶ್ರೀಮತಿ **ಅನುಪಮಾ** ರವರ
ಸಣ್ಣ ಕತೆಗಳ ಸಂಗ್ರಹ
## ಕಣ್ಮಣಿ
[ಚದುರಂಗರ ಮುನ್ನುಡಿಯೊಡನೆ]

**ಗೌರಮ್ಮನವರ "ಕಂಬನಿ"**
**ವಾಣಿಯವರ "ಕಸ್ತೂರಿ"**

ಈ ಸಂಗ್ರಹಗಳ ಪರಂಪರೆಯಲ್ಲೇ
ಇನ್ನೊಂದು ಕೃತಿ!



೬ನೆಯ ಪ್ರಕಟಣೆ

**ಮೇಧಾವಿ ಸ್ಟಾಲಿನ್ನರ**
ಉಜ್ವಲ ಕೃತಿ
## ಮಾರ್ಕ್ಸ್‌ವಾದ
ಮತ್ತು
## ಜನಾಂಗ ಪ್ರಶ್ನೆ
[Marxism and
The National Question]



ನಿಮ್ಮ ಪ್ರತಿಗಳನ್ನು ಇಂದೇ
ಕಾದಿರಿಸಿ!

# ಎರಡು ಮಾತು

ಈ ಪುಸ್ತಕದ ಮೂಲ ಲೇಖಕರಾದ ಶ್ರೀ "ಆತ್ರೇಯ"ರವರು ಆಂಧ್ರ ದೇಶದಲ್ಲಿ ಹೆಸರಾಂತ ನಾಟಕಕಾರರು. ಪ್ರಸಿದ್ಧ ನಟರೂ ಹೌದು. ಅವರ ನಾಟಕಗಳಾದ "ಪರಿವರ್ತನೆ" [ಕನ್ನಡದಲ್ಲಿ "ಕವಿಪುಂಗವ"], "ಈ ನಾಡು", "ಗುಮಾಸ್ತೆ", "ಪ್ರಗತಿ" —ಇವು ಆಂಧ್ರ ನಾಟಕ ಕಲಾ ಪರಿಷತ್ತಿನ ವಾರ್ಷಿಕಾಧಿವೇಶನಗಳಲ್ಲಿ ಪ್ರಥಮ ಬಹುಮಾನ ಪಡೆದಿವೆ. ಅತ್ರೇಯರು ಈಗ ಮದರಾಸು ಸರಕಾರದ "ಫಿಲ್ಮ್ ಅಕ್ಯಾಡೆಮಿ"ಯ ನಿರ್ದೇಶಕ ಮಂಡಲದಲ್ಲೊಬ್ಬರಾಗಿ ಆರಿಸಲ್ಪಟ್ಟಿದ್ದಾರೆ.

ಇದನ್ನು ಕನ್ನಡಿಸಲು ಪ್ರೇರಣೆ ಇತ್ತವರು ಮುಂಬಯಿಯ ಜನತಾ ರಂಗಭೂಮಿಯ [ಪೀಪ್‌ಲ್ಸ್ ಥಿಯೇಟರ್] ತೆಲುಗು ಶಾಖೆಯ ಕಲಾವಿದರು ಮತ್ತು ವಿಶೇಷವಾಗಿ ಅದರ ಕಾರ್ಯದರ್ಶಿಯಾಗಿದ್ದ ಶ್ರೀ ಆರ್. ರಾಮರಾಯರು. ಶ್ರೀಯುತ ರಾಮರಾಯರು ಮತ್ತು ಅವರ ಪತ್ನಿ ಶ್ರೀಮತಿ ಪದ್ಮಾ ರಾಮರಾಯರು ಕನ್ನಡಿಗರಾಗಿದ್ದರೂ ಸಹ ಮುಂಬಯಿಯ ಜನತಾ ರಂಗಭೂಮಿಯ ತೆಲುಗು ಶಾಖೆಯ ಜೀವಾಳವಾಗಿದ್ದಾರೆ. ಮೇಲೆ ಸೂಚಿಸಿದ ಎಲ್ಲಾ ತೆಲುಗು ನಾಟಕಗಳನ್ನು ಮುಂಬಯಿಯಲ್ಲಿ ಯಶಸ್ವಿಯಾಗಿ ಪ್ರಯೋಗ ಮಾಡಿ ತೋರಿಸಿದ್ದಾರೆ.

ಮೂಲ ಕೃತಿಯ ಹೆಸರು "ಪರಿವರ್ತನೆ" ಎಂದಿದ್ದರೂ ಕನ್ನಡದಲ್ಲಿ ಅದೇ ಹೆಸರಿನ ಬೇರೆ ಒಂದೆರಡು ಕೃತಿಗಳು ಇರುವುದರಿಂದ "ಕವಿ ಪುಂಗವ" ಎಂದು ಕರೆಯಲಾಗಿದೆ. ಕನ್ನಡಿಸಿದ ಮೇಲೆ, ಕನ್ನಡ ಪ್ರೇಕ್ಷಕರೆದುರು ಮುಂಬಯಿಯಲ್ಲಿ ಇದನ್ನೊಮ್ಮೆ ಅಭಿನಯಿಸ ಲಾಯಿತು. ಅದರಲ್ಲಿ ಚಂದ್ರಕಾವಿ ದಂಪತಿಗಳು, ಶ್ರೀಯುತರು ಜಯಭೀಮರಾಯರು, ಕಾಂದಿಲ್ಕರ್ ವೆಂಕಟರಾಯರು, ಸಂಜೀವ ಹೆಗ್ಗಡೆಯವರೇ ಮೊದಲಾದ ಗೆಳೆಯರು ಭಾಗವಹಿಸಿದರು. ಹೆಸರಾಂತ ಚಲಚ್ಚಿತ್ರ ನಟ ಶ್ರೀ ಬಲರಾಜ್ ಸಹಾನಿಯವರು ಹೆಚ್ಚಿನ ಆಸಕ್ತಿ ವಹಿಸಿ, ನಾಟಕವನ್ನು ಅಣಿಗೊಳಿಸಲು ನೆರವಾದರು. ಆ ಪ್ರಯೋಗ ಬಲು ಯಶಸ್ವಿಯಾಯಿತು.

ಪ್ರಕಾಶನದ ಸಂಪಾದಕದ್ವಯರಲ್ಲಿ ಒಬ್ಬರಾದ ವಾಸುದೇವರು ಇದನ್ನು ಅನುವಾದಿಸಿದ್ದಾರೆ. ಆತ್ರೇಯರ ಇತರ ನಾಟಕಗಳನ್ನೂ ಅವರು ಕನ್ನಡಕ್ಕೆ ಅನುವಾದಿಸಿ ಸಿದ್ಧಗೊಳಿಸಿದ್ದಾರೆ. ಕ್ರಮೇಣ ಅವುಗಳನ್ನು ಪ್ರಕಟಿಸುವ ಅಭಿಲಾಷೆಯೂ ಇದೆ. "ಕವಿ ಪುಂಗವ"ವನ್ನು ಜನಪ್ರಿಯಗೊಳಿಸಲು ಕನ್ನಡ ಕಲಾವಿದರೂ ಕಲಾಭಿಮಾನಿಗಳೂ ನೆರವಾಗುವರೆಂಬ ನಂಬಿಕೆ ನಮಗಿದೆ.

ನಾಟಕದಲ್ಲಿ, ಮೈಸೂರಿನಲ್ಲಿ ಬಳಕೆಯಲ್ಲಿರುವ ಕನ್ನಡವನ್ನು ಉಪಯೋಗಿಸಲಾಗಿದೆ. ಉತ್ತರ ಕರ್ನಾಟಕ ಜಿಲ್ಲೆಗಳಲ್ಲೂ ದಕ್ಷಿಣ ಕನ್ನಡದಲ್ಲೂ ಅದನ್ನು ಅಭಿನಯಿಸುವವರು

ತಮ್ಮ ತಮ್ಮಲ್ಲಿ ಬಳಕೆಯಲ್ಲಿರುವ ಕನ್ನಡವನ್ನು ಉಪಯೋಗಿಸಿಕೊಳ್ಳಬೇಕು. ಅಭಿನಯಿಸ ಲಿಚ್ಛಿಸುವವರು ಮುಂಚಿತವಾಗಿ ಪ್ರಕಾಶಕರಿಗೆ ಬರೆಯುವರೆಂಬುದು ನಮ್ಮ ನಿರೀಕ್ಷೆ ಯಾಗಿದೆ.

ಈ ಕೃತಿಯ ಮುದ್ರಣ ಕಾರ್ಯದಲ್ಲಿ ನೆರವಾದ, ಬೆಂಗಳೂರಿನ ನ್ಯಾಷನಲ್ ಥಿಯೇಟರ್ಸ್‌ನ ಕಾರ್ಯದರ್ಶಿ ಶ್ರೀ ಬಿ. ಕೃಷ್ಣರವರಿಗೂ, ಹಸ್ತಪ್ರತಿಯನ್ನು ಸಿದ್ಧಗೊಳಿಸಿ ಸಹಕರಿಸಿದ ತರುಣ ಲೇಖಕರಾದ ಶ್ರೀ ಕೆ. ಎಲ್. ಗೋಪಾಲಕೃಷ್ಣರವರಿಗೂ ನೆನಕೆ ಸಲ್ಲಬೇಕಾಗಿದೆ. ಪ್ರಗತಿಶೀಲ ಚಿತ್ರಕಾರರಾದ ಶ್ರೀ ಆರ್. ಎಸ್. ಎನ್., ಹೊದಿಕೆ ಚಿತ್ರವನ್ನು ಬರೆದು ಪ್ರಕಟಣೆಗೆ ಶೋಭೆ ತಂದಿದ್ದಾರೆ.

ಬೆಂಗಳೂರು | ಕುಳುಕುಂದ ಶಿವರಾಯ
ಜನವರಿ, ೧೯೫೦ | [ನಿರಂಜನ]



## ಪಾತ್ರ ಪರಿಚಯ

ಸಂಪತ್ . . . ಶ್ರೀಮಂತ ಬಂಡವಾಳಗಾರ, ಕವಿಯ ಪೋಷಕ
ಶೋಭಾ . . . . . . ಸಂಪತ್‌ನ ತಂಗಿ
ರಘು . . . . . . ಕವಿ ಪುಂಗವ
ಹರೀಂದ್ರ . . . ಕೂಲಿಗಾರ ಸಂಘದ ಕಾರ್ಯದರ್ಶಿ
ದಾಸಪ್ಪ . . . ಸಂಪತ್ ಮನೆಯಲ್ಲಿ ಲೆಕ್ಕ ಬರೆಯುವವ; —ಇಳಿ ವಯಸ್ಸಿನ ಮುದುಕ
ರಂಗ . . ಸಂಪತ್ ಮನೆಯಲ್ಲಿ ಕೆಲಸಮಾಡುವ ಹುಡುಗ; —ವೀರಯ್ಯನ ಮಗ
ವೀರಯ್ಯ . . . ಸಂಪತ್ ಕಾರ್ಖಾನೆಯಲ್ಲಿ ಕೂಲಿಕಾರ
ಚನ್ನಯ್ಯ . . . ಕೂಲಿಕಾರ; ವೀರಯ್ಯನ ಸಂಬಂಧಿಕ

# ಕವಿ ಪುಂಗವ

## ದೃಶ್ಯ ೧

[ಸಂಪತ್ ಬಂಗಲೆ. ಅದರಲ್ಲಿ ಕವಿಗಾಗಿಯೇ ಬಿಟ್ಟುಕೊಟ್ಟಿರುವ ಕೋಣೆ. ರಂಗನು ಹಾಡುತ್ತಿದ್ದಾನೆ. ಶೋಭಾ ಕೇಳುತ್ತ, ಹಾಡನ್ನು ಕಲಿತು ಕೊಳ್ಳುತ್ತಿದ್ದಾಳೆ.]

**ರಂಗ:** [ಹಾಡು]

ಕವಿ ಪುಂಗವಾ ! ಕವಿ ಪುಂಗವಾ !
ಸ್ವಪ್ನ ಸಗ್ಗದಿ ನೀನು ವಿಹರಿಸುವೆಯಾ ?
ವಾಸ್ತವಿಕ ಜಗಕಿಳಿದು ಬರಲಾರೆಯಾ ?
ಬಕ್ಕ ನೆತ್ತಿಗಳಿಂದ ಉಕ್ಕಿ ಹೊರ ಹೊಮ್ಮುತಿಹ
ಬಡಬಾಗ್ನಿಯದು ನಿನ್ನನೆಚ್ಚರಿಸದೇ ?
ಜಗವ ನಡೆಯಿಸುವಂಥ ಜ್ಞಾನ ಜ್ಯೋತಿಯು ನೀನು
ಹೆಮ್ಮೆ ಹುಟ್ಟಿಸುವಂಥ ದಿವ್ಯೌಷಧ.
ನೀನೊಮ್ಮೆ ರೋಷಿದರೆ ಲೇಖನಿಯೆ ಕತ್ತಿಯೈ
ರೋಷಿ ಹೇಳಿದರೊಮ್ಮೆ ಮಾತುಗಳೆ ಈಟಿಗಳು
ಅನ್ಯಾಯ ಲೋಕವೇ ಅದುರಿ ಹೋಗುವುದು !

[ಒಳಗಿನಿಂದ ಕವಿಯ ಕೂಗು-"ಸಾಕಿನ್ನು ! ಸದ್ದು !" ರಂಗನು ಹಾಡನ್ನು ನಿಲ್ಲಿಸುತ್ತಾನೆ.]

**ಶೋಭಾ:** ನೀನು ಹಾಡೋ. ಪರವಾಯಿಲ್ಲ. ಆ ಕವಿಗಳಿಗೆ ಇಂತಹ ಹಾಡುಗಳೆಂದರೆ ತಲೆ ನೋವು !

**ರಂಗ:** [ಮತ್ತೆ ಹಾಡುತ್ತಾನೆ]

ಪೇಳೆಲೈ ಬಡ ಜನರ ಗೋಳನ್ನು ತಿಳಿವಂತೆ
ಬರೆಯೆಲೈ ಉಳ್ಳವರು ನಡುಗಿ ಪೋಪಂತೆ

ಗುಡಿಸಿಲಲಿ ಚಂದಿರನ ಸೃಷ್ಟಿಸಯ್ಯಾ
ಕವಿತೆ ಜಡಿ ಮಳೆಯ ನೀ ವೃಷ್ಟಿಸಯ್ಯಾ !

[ಕವಿ ಸರಸರನೆ ಬರುತ್ತಾನೆ. ಕೈಯಲ್ಲಿ ಕೆರೆದ ಕಾಗದಗಳು, ಬರೆದ ಲೇಖನಿ ಇವೆ]

ಕವಿ: ನಿಲ್ಲಿಸೆಂದು ಹೇಳಿದ್ದು ನಿನಗಲ್ಲವೇ ? ಇದೇನು ಕೂಗು 'ಗಿರೋ' ಎಂತ ? ಕಿವಿ-ಗಡಚಿಕ್ಕುತ್ತವೆ.

ಶೋಭಾ: ನಾನು ಹೇಳಿದೆ ಅವನಿಗೆ ಹಾಡೂಂತ.

ಕವಿ: [ಸ್ವಲ್ಪ ತಡೆದು ಗಂಭೀರವಾಗಿ] ನಾನೆಂದೆ ಬೇಡಾಂತ.

ಶೋಭಾ: ನೀವು ಬೇಡವೆಂದದ್ದು ನನಗೂ ಕೇಳಿಸಿತು. ನಾನು ಹಾಡೆಂದದ್ದೂ ರಂಗನಿಗೆ ಕೇಳಿಸಿದೆ.

ಕವಿ: [ಸೌಮ್ಯವಾಗಿ] ಶೋಭಾ! ಹೊರಗಿನ ಮನುಷ್ಯ ಕೆಲಸ ಮಾಡು ತ್ತಿರುವುದನ್ನು ಗಮನಿಸಬೇಕು.

ಶೋಭಾ: ಓಹೋ ! ಕವಿಗಳು ಬರೆಯುತ್ತಿದ್ದಾರೇನು ? ಅಯ್ಯೋ ಎಂತಹ ತಿಳಿಗೇಡಿ ನಾನು ! ಎಷ್ಟು ಕೆಟ್ಟವಳು! ಸಾಹಿತ್ಯ ಪ್ರಪಂಚ! ಹೋಯಿತು ! ಹೋಯಿತು !

ರಂಗ: ಏನ್ರವ್ಮಾ ? ಏನು ಹೋಯ್ತು ?

ಶೋಭಾ: ಮೂರ್ಖ ! ಕನ್ನಡ ಸಾಹಿತ್ಯಕ್ಕೆ ಒಂದು ಅಮೂಲ್ಯ ಕಾಣಿಕೆ ಹೋಯಿತು. ಒಂದು ಪ್ರಣಯ ಗೀತೆ ಹೋಯಿತು. ಕವಿವರ್ಯರ ಲೇಖನಿ ಹಠಾತ್ತಾಗಿ ನಿಂತು ಹೋಯಿತು. ಯಾವ ಅಪ್ಸರೆಯ ಅಂದ ನೋಡುತ್ತಲೋ, ಯಾವ ಪಂಚಮ ಶ್ರುತಿ ಆಲಾಪಿಸುತ್ತಲೋ, ಸ್ವರ್ಗಸೀಮೆಯಲ್ಲಿ ಕನಸು ಕಾಣುತ್ತಿದ್ದ ಕವಿಯ ಲೇಖನಿಯಿಂದ ಇಳಿಯುತ್ತಿದ್ದ ಅಮೃತಧಾರೆಗೆ ನಿನ್ನ ಈ ಹಾಳು ಹಾಡು—[ರಂಗ ನಿಗೆ 'ಹಾಳು ಹಾಡು' ಎಂದೊಡನೆಯೇ ಸಿಟ್ಟು ಬರುವುದು. ಆದರೂ ಶೋಭಾಳ ಮಾತಿನ ಭರದಲ್ಲಿ ಸುಮ್ಮನಿದ್ದಾನೆ.] ಹಾಳು ಹಾಡು ಆಣೆ ಕಟ್ಟಾಗಿ ನಿಂತು ಬಿಟ್ಟಿದೆ ! ಕನ್ನಡ ನುಡಿವೆಣ್ಣಿಗೊಂದು ಅಮೂಲ್ಯ, ಅಮೋಘ, ಅದ್ವಿ ತೀಯ, ಅದ್ಭುತ—....

ಕವಿ: ಶೋಭಾ ! [ದೈನ್ಯದಿಂದ] ಪ್ಲೀಸ್ !

ಶೋಭಾ: ಕ್ಷಮಿಸಿ. ಕ್ಷಮಿಸಿ.

ಕವಿ: [ಜುಗುಪ್ಸೆಯಿಂದ] ಕ್ಷಮಿಸಿದ್ದೇನೇಳು.

ಶೋಭಾ: ಕವಿಗಳಿಗೆ ಕೋಪ ಬಂದಿದೆ, ರಂಗಾ ! ಬಾ, ಹೋಗೋಣ. [ಇಬ್ಬರೂ ಹೊರಡುತ್ತಾರೆ]

ಕವಿ: ಇಗೋ ! [ಶೋಭಾ ತಿರುಗಿ ನೋಡುವಳು] ನಿಮ್ಮನ್ನಲ್ಲ; ನೀವು ದಯಮಾಡಿಸಬಹುದು ! [ಶೋಭಾ ಸರ್ರನೆ ಹೊರಟು ಹೋಗುವಳು] ರಂಗಾ ! ಇಲ್ಲಿ ಬಾ. ಈ ಹಾಡನ್ನು ಶೋಭಾ ಹಾಡೆಂದು ಹೇಳಿದಳೇ ?

ರಂಗಾ: ಹೌದ್ರಿ ! ಹಾಡೂಂತ ಹೇಳಿ ಆ ಮೇಲೆ 'ಹಾಳ್ಹಾಡು' ಅನ್ನೋದು ಆಕೀಗೆ ಎಷ್ಟ್ ಚೆನ್ನೋ ಏಳಿ ! ಇದುವರ್ಗೆ ಎಂದೂ ಹೀಗಂದಿರ್ಲಿಲ್ಲ. ಇನ್ಮೇಲೆ ಹಾಡೆಂದ್ರೆ ಹಾಡ್ತೇನ್ಯೆ ? ನಮ್ ಹರೀಂದ್ರರಿಗೆ ಈ ಹಾಡೆಂದ್ರೆ ಕಿವಿ ನೆಟ್ಟಾಗುತ್ತೆ ! ಈಕೀಗೆ ಇದು ಹಾಳ್ಹಾಡು !

ಕವಿ: ಯಾರೋ ಹರೀಂದ್ರರು ? [ಆಲೋಚಿಸುತ್ತಾ] ಈ ಹಾಡನ್ನು ಬರೆದವರು ಅವರೇ ಏನು ?

ರಂಗ: ಹರೀಂದ್ರರು ಗೊತ್ತಿಲ್ವೇ ನಿಮ್ಗೆ ? ಅವ್ರು ನಮ್ ಸಂಗದ ಹಿರೀರು ! ಆದರೆ ಈ ಹಾಡು ಬರ್ದೋರು ಅವ್ರಲ್ಲ. [ಆಗ ತನಗೆ ಬೇಕಾದ ಯಾವುದೋ ಪುಸ್ತಕ ತೆಗೆದುಕೊಳ್ಳಲು ಶೋಭಾ ಬರುತ್ತಾಳೆ] ಯಾರೋ ಜನತಾ-ಕವಿ ಬರೆದಿದ್ದಾರಂತೆ. ಅವ್ರ ವಿಸ್ಯ ಭಾಳ ಹೇಳ್ತಾರೆ. ಒಳ್ಳೇ ಒಳ್ಳೇ ಹಾಡುಗೈಲ್ಲಾ ಅವರೇನಂತೆ ಬರೆದೋರು.

ಶೋಭಾ: ಹುಂ. ಈ ಕವಿಗಳಿಗೇನು ಕಡಿಮೆ ಈ ಕಾಲದಲ್ಲಿ ! ಏನೂ ಕೆಲಸ ತೋಚದವರೆಲ್ಲ ಕವಿಗಳಾಗಿ ಕೂಡುತ್ತಾರೆ. ಭಾಷೆ, ಛಂದಸ್ಸು, ವ್ಯಾಕರಣ, ಅಲಂಕಾರ, ಪ್ರಾಸ—ಇವು ಯಾವುವೂ ತಿಳಿಯದವರೆಲ್ಲ ಜನತಾ-ಕವಿಗಳಾಗಿ ಮೆರೀತಾರೆ. ಅವರು ಬರೆಯುವ ಪ್ರತಿ ಕಸದ ಚೀಟಿಯೂ ಸಹ ಜನತಾ-ಸಾಹಿತ್ಯವಾಗ್ತದೆ. ಹಾಗೆಂದರೆ ನಾನೂ ಕೂಡ ಕವಯಿತ್ರಿಯೇ ! ನಿಜವಾದ ಕವಿತೆ ಅಂದರೆ ಏನು ಗೊತ್ತೆ ? ಕೇಳು ಹೇಳುತ್ತೇನೆ—ನಮೂನೆಗೆ !

ಎನ್ನ ಸುಖ ನಿದ್ರೆಯನು ಭಂಗ ಮಾಡಲೋ ಏನೋ
ನೀ ನಗುತ ಪೋದೆಯಾ ಎನ್ನ ರಾಣಿ !
ಪ್ರಿಯತಮೆಯೆ ಪೋದೆಯಾ ನೋಡುತೆನ್ನ ?
ನಿನ್ನ ಮುಗುಳುನಗೆ ಬೆಳ್ಳಿಯ ಹುಣ್ಣಿಮೆ
ಎನ್ನ ಹೃದಯವೇ ಕನ್ನೈದಿಲೆಯು
ಎನ್ನನು ನೋಡುತ ನಕ್ಕು ಪೋದೆಯಾ ?
ಕಗ್ಗತ್ತಲೆಯಲಿ ಕೆಡವಿ ಪೋದೆಯಾ ?
ಹಾಡ ಪಾಡುತೆನ್ನ ಬದುಕು ತೋಟದಲಿ
ಜೇನಿನ ಸೋನೆಯ ತಿರುಗಿಸಬಾರದೆ ?
ನಾನೇ—ನೀನು, ನೀನೇ—ನಾನು
ಲೋಕವಿದೆಲ್ಲವೂ ಪ್ರೇಮ ಧಾಮವೇ !

**ಕವಿ:** ಶೋಭಾ ! [ದೈನ್ಯದಿಂದ] ಸುಮ್ಮನಿರಬಾರದೇ ? !

**ಶೋಭಾ:** ಅದು ಹಾಗಿರಲಿ ! ರಂಗನು ಹೇಳಿದ ಹಾಡಿನ ವಿಷಯವಾಗಿ ನಿಮ್ಮದೇನು ಅಭಿಪ್ರಾಯ ? ಹೇಳಿ !

**ಕವಿ:** ಬಹಳ ಚೆನ್ನಾಗಿದೆ.

**ಶೋಭಾ:** ಅದೋ ! ಕವಿಗಳಲ್ಲಿ ಕಾಣುವ ಇನ್ನೊಂದು ದುರ್ಗುಣ ಇದು- ಮೇಲ್ಮಾತಿಗೆ'ಚೆನ್ನ'ಎನ್ನುವುದು. ಮುಖ ನೋಡಿ ಮಣೆಹಾಕುವುದು!

**ಕವಿ:** ಹೌದು. ನಿಮ್ಮ ಮುಖ ನೋಡಿಯೇ ಚೆನ್ನವೆಂದೆ !

**ಶೋಭಾ:** ಓ ! ಹಾಗಾದರೆ ಚೆನ್ನಾಗಿಲ್ಲ ಎನ್ನಿ !

**ಕವಿ:** ಹೌದು, ಚೆನ್ನಾಗಿಲ್ಲ.

**ಶೋಭಾ:** ಏನು ಚೆನ್ನಾಗಿಲ್ಲ ಅದರಲ್ಲಿ ?

**ಕವಿ:** [ಮೇಲೆಕ್ಕೆದ್ದು] ಇದೇನು 'ಕ್ರಾಸು'? ಏನು ಪಾಟೀ ಸವಾಲು ?

**ಶೋಭಾ:** ಕ್ರಾಸು ! ಪಾಟೀ ಸವಾಲು ! ಹಾಗೆ ತಿಳಿದುಕೊಳ್ಳುವ ಹಾಗಿದ್ದರೆ ನನಗೇಕೆ ಈ ಮಾತು ! ನಮಸ್ಕಾರ ! [ಹೊರಡುವಳು]

**ರಂಗ:** [ತಾನಾಗಿಯೇ] ಸಾವ್ಕಾರ್ರು ಮನೇಲಿದ್ರೆ ಇವ್ರು ಹೀಗ್ಮಾಡೋಲ್ಲ ಅವ್ರು ಇಲ್ದಾಗ್ಲೆಲ್ಲ ನನ್ ಪ್ರಾಣಾ ಹಿಂಡ್ತಾರೆ— ಹಾಡೂ....ಂತ !

ಕವಿ: ಅದಿರಲಿ ಬಿಡು. ಅದೇನು ನೀನು ಹೇಳುತ್ತಿದ್ದದ್ದು ? [ನೆನಪು ಮಾಡಿಕೊಂಡು] ಹಾ !....ಅದು ಯಾವುದೋ ನಿಮ್ಮ ಸಂಘ ?

ರಂಗ ಕೂಲಿಕಾರ್ರ ಸಂಗ. ಹರೀಂದ್ರರು ನಮ್ ಸಂಗದಲ್ಲಿ ದೊಡ್ಡವರು. ಅವ್ರು ನಮ್ಗೆ ಒಳ್ಳೆ ಬುದ್ಧಿ ಹೇಳ್ತಾರೆ...ಆದ್ರೆ....ರಾಯ್ರೆ ! ನೀವೂ ಕವಿಗ್ಳೇ ಅಲ್ವೆ ?

ಕವಿ: ಆ ! ನಿಂಗ್ಯಾಕೆ ಆ ಮಾತು ?

ರಂಗ: ನೀವಿಂತಾ ಹಾಡುಗ್ಳು ಬರ್ಯೋದಿಲ್ವೆ ?

ಕವಿ: ಯಾರೋ ನಿನಗೆ ಹೇಳಿದ್ದು ? ಶೋಭಾನೇನೋ ?

ರಂಗ: ಹೌದ್ರಿ. ಇಲ್ದಿದ್ರೆ ನಂಗ್ ಹ್ಯಾಗ್ ತಿಳೀಬೇಕು ?

ಕವಿ: ಏನು ಹೇಳಿದಳೊ !

ರಂಗ: ಅದೇನೋ ನಿಮ್ ಹಾಡುಗ್ಳೆಲ್ಲಾ ನಮ್ಮಂತೋರಿಗೆ ತಿಳ್ಯೋಲ್ವಂತೆ ! [ಕವಿ ದಿಟ್ಟಿಸಿ ನೋಡುತ್ತಾನೆ] ಏನೂ ಚೆ....ನ್ನಾ....ಗಿ....ರೋ....ಲ್ವಂ....ತೆ ! ನೀವ್ ಬರ್ಯೋದೆಲ್ಲಾ ಅದೇನೋ ಹೆಂಗಸ್ರ ಅಂದಾ-ಚಂದಾ ಇದೇನಂತೆ ?

ಕವಿ: ಯಾವಾಗ ಹೇಳಿದಳು ?

ರಂಗ: ನಾನು ಹಾಡೋವಾಗ್ಲೆಲ್ಲಾ ಅಂತಾ ಇರ್ತಾರೆ.

ಕವಿ: [ಕೈಲಿದ್ದ ಕಾಗದಗಳನ್ನು ನಿಧಾನವಾಗಿ ಹರಿದು ಬಿಸಾಡುತ್ತಾನೆ.] ಊ! ಇನ್ನೂ ಏನೇನು ಹೇಳಿದಳು ?

ರಂಗ: ರಾಯ್ರೇ ! ಅವರ್ನ ಕೇಳ್ಬೇಡಿ. ನನ್ಮೇಲೆ ಕೋಪಿಸ್ಕೋತಾರೆ.

ಕವಿ: ಇಲ್ಲ ಬಿಡು. ನಾನು ಕೇಳೋದಿಲ್ಲ. ಇನ್ನೂ ಏನೇನು ಹೇಳಿದಳು ? ಹೇಳು.

ರಂಗ: ನಾನು ಹೇಳೋ ಹಾಡೂಂದ್ರೆ....ನಿಮ್ಗೆ....ಅದೇನೋ ! ತಲೆ ನೋವಂತೆ !

ಕವಿ: ಆಮೇಲೆ ?

["ರಂಗಾ" ಎಂದು ಒಳಗಿನಿಂದ ಶೋಭಾ ಕೂಗುತ್ತಾಳೆ. "ಓ! ಬಂದೆ ಬಂದೆ" ಎನ್ನುತ್ತಾನೆ ರಂಗ ]

ರಂಗ: ಅಮ್ಮಾವ್ರು ಕರೀತಿದ್ದಾರೆ. ನಾ ಬರ್ತೀನೆ ರಾಯ್ರೆ! ಅವರ್ಗೆ ಹೇಳ್ಬೇಡಿ ಮತ್ತೆ....

(ರಂಗಾ ಹೋಗುತ್ತಾನೆ. ದಾಸಪ್ಪ ಬರುತ್ತಾನೆ)

ದಾಸಪ್ಪ: ಏನು ರಾಯರೇ? ಏನಾದರೂ ಕಾಗದ ಉಂಟೆ?

ಕವಿ: ಇಲ್ಲ ದಾಸಪ್ಪನವರೇ. ಸಾಹುಕಾರರು ಇದ್ದಾರೆಯೇ ಮನೆಯಲ್ಲಿ?

ದಾಸಪ್ಪ: ಇಲ್ಲ ಎಲ್ಲೋ ಹೋಗಿದ್ದಾರೆ.

ಕವಿ: ಎಲ್ಲಿಗೆ ಹೋದರು?

ದಾಸಪ್ಪ: ಎಲ್ಲಿಗೇನು! ಎಲ್ಲೋ ಮೀಟಿಂಗುಗಳಂತೆ! ಉಪನ್ಯಾಸಗಳಂತೆ! ದಿನಬೆಳಗೂ ತಿರುಗುವುದೇ ಕೆಲಸ! ಒಂದು ಕ್ಷಣ ಬಿಡುವಿಲ್ಲ. ಮೊನ್ನೆ ನೀವು ಬರೆದುಕೊಟ್ಟಿದ್ದ ಭಾಷಣ ಬಹಳ ಚೆನ್ನಾಗಿತ್ತಂತೆ. ಎಲ್ಲರೂ ಹೇಳ್ತಾರೆ. ಸಾವ್ಕಾರ್ರು ನಿಲುಕಡೆಯಿಲ್ದೆ ಧಾರಾಳವಾಗಿ ಓದಿಬಿಟ್ರು. ಅದು ನಿಮ್ಮ ಬರಹವಾದ್ದರಿಂದ ಇನ್ನೂ ಕಳೆ ಕಟ್ಟಿತು.

ಕವಿ: ಬರೆದವನು 'ನಾನು' ಎಂದು ಎಲ್ಲರೂ ಬಲ್ಲರೆ?

ದಾಸಪ್ಪ: ಕೇಳಿದವರಿಗೆ ಹೇಗೆ ತಿಳಿಯುತ್ತೆ? ನೋಡುವವರಿಗೆ ಗೊತ್ತಾಗುತ್ತೆ. ಆತನಾದರೂ ಏನು? ಇತರರಿಗೆ ತಿಳಿಯೋ ಹಾಗೆ ಓದುತಾರೆಯೇ?! ನಿಜ ಹೇಳೋದಾದರೆ. ನಮ್ಮ ಸಂಪತ್, ಚಿಕ್ಕಂದಿನಿಂದಲೂ ತುಂಬಾ ಹುಷಾರ್! ಶೋಭಾ ಎಲ್ಲಾ ಅವರ ತಾಯಿಯವರ್ನೆ ಹೋಲ್ತಾಳೆ. ಪಾಪ! ಅವಳಿಗೆ ಏನೂ ತಿಳೀದು. ನಾನು ಇವರ್ನೆಲ್ಲಾ ಎತ್ತಿ ಆಡಿಸಿದ್ದೇನೆ. ಒಂದು ಕ್ಷಣವೂ ಇವರು ನನ್ನ ಬಿಟ್ಟು ಇರ್ತಿರಲಿಲ್ಲ. ಈಗ ತಾನೇ ...ಈತನಿಗೆ ಸಭೆಗಳು ಉಪನ್ಯಾಸಗಳು, ಪದವಿಗಳು! ಹುಂ! ದೊಡ್ಡವನಾದ! ಯಜಮಾನ ಬೇರೆ! ಆದ್ದರಿಂದಲೇ "ನೀವು" ಎನ್ನಬೇಕಾಗಿ ಬಂದಿದೆ....ಅದಿರಲಿ. ನಿಮ್ಮನ್ನೆಂದೂ ಕೇಳಿಲ್ಲ. ಏನೂ ತಿಳ್ಕೋಬೇಡಿ. ನೀವು ಎಷ್ಟು ಓದಿಕೊಂಡಿದ್ದೀರಪ್ಪ?

ಕವಿ: [ತಲೆ ಎತ್ತಿ ನೋಡದೆ] ಬಿ. ಎ. ಮೋಚಿಕೊಂಡದ್ದಾಗಿದೆ!

ದಾಸಪ್ಪ: ಯಾಕಪ್ಪಾ ? ಅಷ್ಟೊಂದು ಬೇಸರವಾಗಿ ಹೇಳ್ತೀರಿ !
ಕವಿ: ಏಕೂ ಇಲ್ಲ.
ದಾಸಪ್ಪ: ಏನೋಪ್ಪ ! ನಿಮ್ಮ ತತ್ವವೇ ವಿಚಿತ್ರವಾಗಿದೆ.
ಕವಿ: ವಿಚಿತ್ರವಾಗಿದೆಯೇ ?
ದಾಸಪ್ಪ: ಇಲ್ಲವೇ ಮತ್ತೆ ? ಬಿಏ ಓದಿದ್ದೀರಿ. ಕವಿ ಬೇರೆ ಆಗಿದ್ದೀರಿ. ಇನ್ನೂ ಸಣ್ಣ ವಯಸ್ಸು. ನಿಮ್ಮ ಭಾಷಣ ಕೇಳ್ತಾ ಇದ್ರೆ ಎಲ್ಲರಿಗೂ ಆಶ್ಚರ್ಯ ! ಸಾವ್ಕಾರ್ರಿಗೆ ಎಲ್ಲೂ ಇಲ್ದ ಪ್ರತಿಷ್ಠೆ ಬರುತ್ತೆ. ಇಷ್ಟು ಬುದ್ಧಿ ಇದ್ದೂ ಕೂಡ-ಇಷ್ಟೊಂದು ಬೇಸರ ವಾಗಿ ಅದ್ಯಾಕೆ·ಮಾತಾಡ್ತೀರೋ ನಾ ಬೇರೆ ಕಾಣೆ. ನಿಮ್ಮ ಹೃದಯದಲ್ಲಿ ಅದೇನೋ ಬಾಧೆ ಇದೆ. ಹೇಳೋದಕ್ಕೆ ಹಿಂಜರೀ ತೀರಿ. ನೋಡೀಪ್ಪ! ದಾಸಪ್ಪನಿಗೆ ಮುಚ್ಚು ಮರೆ ಏನೂ ಇಲ್ಲ. ಇದ್ದದ್ದು ಇದ್ದಂತೆ ಹೇಳೋದು, ಕೇಳೋದು, ನನ್ನ ಸ್ವಭಾವ. ಏನೂ ತಿಳ್ಕೋಬೇಡಿ ಮತ್ತೆ.
ಕವಿ: ದಾಸಪ್ಪನವರೆ ! ನಾನು ಮರೆತಿರೋದನ್ನೆಲ್ಲ ನೀವು ನನಗೆ ನೆನಪು ಮಾಡಿಕೊಡುತ್ತಿದ್ದೀರಿ !
ದಾಸಪ್ಪ: ನಿಮಗೆ ಅಷ್ಟೊಂದು ಕಷ್ಟವಾದರೆ ನಾನೇನೂ ಮಾತಾಡೋ ದಿಲ್ಲ. ಏನೋ ನಿಮ್ಮ ಮೇಲಿನ ಅಭಿಮಾನದಿಂದ ಇಷ್ಟು ಮಾತ್ರ ಮಾತನಾಡಿದೆ.
ಕವಿ: ಹಾಗಲ್ಲ ದಾಸಪ್ಪನವರೇ ! ನೀವು ಪುಣ್ಯಾತ್ಮರು !
ದಾಸಪ್ಪ: ಪಾಪ ಪುಣ್ಯಗಳು ನಮಗೇಕಪ್ಪ ಬಡವರಿಗೆ ? ಬಡವರ ಲ್ಲಿಯೂ ಪುಣ್ಯಾತ್ಮರಿದ್ದಾರೆಯೇ ?
ಕವಿ: [ಎಲ್ಲಿಯೋ ನೋಡುತ್ತಾ] ನಿಜ. ಪುಣ್ಯಾತ್ಮರಾದ್ದರಿಂದಲೇ ಬದುಕಿದ್ದೀರಿ. ನೀವು ಬದುಕುವುದೇನು—ನಿಮ್ಮ ಆಶ್ರಯದಲ್ಲಿರುವ ವರನ್ನು ಬದುಕಿಸುತ್ತಿದ್ದೀರಿ. ಕವಿಗಳ ಹಾಗೆ ಅಲ್ಲ. ಕವಿಗಳೆಲ್ಲರೂ ದುರ್ಭಾಗ್ಯ-ದಾಮೋದರರು! ಅವರು ಬದುಕಿಬಾಳೋದು ಸಾಧ್ಯವಿಲ್ಲ.
ದಾಸಪ್ಪ: 'ಕವಿ-ಕವಿ' ಎನ್ನೋದು ಯಾಕೆ ? ಮನುಷ್ಯರೆಲ್ಲರೂ ಬದುಕಿ ಬಾಳೋದಿಲ್ಲವೇ ? ಕವಿಗಳು ಮನುಷ್ಯರಲ್ಲವೇ ?

ಕವಿ: ನಿಮಗೆ ತಿಳೀದು ದಾಸಪ್ಪನವರೇ ! ಕವಿಗಳು ಬದುಕಲು ಸಾಧ್ಯವಿಲ್ಲ. ಬದುಕುವುದಕ್ಕಾಗಿ ಅವರು ಹುಟ್ಟಲಿಲ್ಲ.

ದಾಸಪ್ಪ: ಬದುಕುವುದಕ್ಕಾಗಿ ಯಾರೂ ಹುಟ್ಟಲಿಲ್ಲ ! ಎಲ್ಲರೂ ಸಾಯುವುದಕ್ಕೆಂತಲೇ....!

ಕವಿ: ಅದಲ್ಲ; ನನ್ನನ್ನು ನೋಡಿ. ನಾನು ಪರಮ ದುರ್ಭಾಗ್ಯ ! ಅದಕ್ಕೇ ಪ್ರಪಂಚ ನನ್ನನ್ನು ಹಾಳು ಮಾಡಿದೆ. ನನ್ನನ್ನೊಬ್ಬ ನನ್ನೇ ಅಲ್ಲ. ನನ್ನನ್ನಾಶ್ರಯಿಸಿದ್ದ ಬಡಪಾಯಿಗಳನ್ನೂ ತನ್ನ ಕಲ್ಲಿನ ಚಕ್ರಗಳಡಿಯಲ್ಲಿ ಜಜ್ಜಿಬಿಟ್ಟದೆ. ಅವರು ನನ್ನನ್ನೇಕೆ ಆಶ್ರಯಿಸಬೇಕಾಗಿತ್ತು ? ಇಷ್ಟಕ್ಕೂ ಅದು ಅವರ ತಪ್ಪೂ ಅಲ್ಲ—ಶಿಕ್ಷೆಗೆ ಸಿಕ್ಕಿದ್ದು ! ನನ್ನದೇ ತಪ್ಪೆಂತಲೇ ಅವರೂ ಸಹ ಶಿಕ್ಷೆ ಅನುಭವಿಸಬೇಕಾಯಿತು. ಹಾಗಿಲ್ಲವಾದರೆ ಕವಿಯಾದವನಿಗೆ ಹೆಂಡತಿಯಾಕೆ ? ಮಕ್ಕಳ್ಯಾಕೆ ? [ಎದ್ದು ನಿಲ್ಲುವನು]

ದಾಸಪ್ಪ: ವ್ಯಥೆ ಪಡಬೇಡೀಪ್ಪ, ಸಾವಧಾನ....ಅದೇನು ಕತೆ ? ಹೇಳಿ ಸುಮ್ಮನೆ ಕಾತರಪಡಬೇಡಿ.

ಕವಿ: [ಕುಳಿತುಕೊಳ್ಳುತ್ತಾ] ನಾನು ಇಲ್ಲಿ ಎಷ್ಟು ದಿನಗಳಿಂದ ಇದ್ದೇನೆ ? ನಿಮಗೆ ಗೊತ್ತಲ್ಲವೆ ?

ದಾಸಪ್ಪ: ಸುಮಾರು ಎರಡು ವರ್ಷಗಳಿಂದ.

ಕವಿ: [ಚಲಿಸನೆ] ಅದಕ್ಕೂ ಹಿಂದಿನ ಬಾಳು. ನಮ್ಮದು ಬಡ ಸಂಸಾರ. ಇದ್ದ ಬದ್ದುದನ್ನೆಲ್ಲಾ ಮಾರಿ ಬಿ. ಎ. ವರೆಗೂ ಓದಿಸಿದರು. ವಂಶೋದ್ಧಾರ ಮಾಡ್ತೀನಿಂತ ಎಷ್ಟೋ ಆಶೆಪಟ್ಟಿದ್ದರು ಹಿರಿಯರು. ಓದು ಮುಗಿಯಿತು. ಆಸ್ತಿ ಕಳೆಯಿತು. ಆಗ್ಗೆ ನನಗೆ ಕವಿತೆ ಬರೆಯೋದು ಸ್ವಲ್ಪ ಸ್ವಲ್ಪ ಬರುತ್ತಿತ್ತು. ಕೆಲಸದ ಬೇಟೆಯಲ್ಲಿ ಕೆಲವು ವರ್ಷಗಳು ಕಳೆದವು. ದಾಸಪ್ಪನವರೇ ! ಕವಿತೆ ಬರೆಯೋದು ನಿಮಗೆ ಬಾರದು. ಕವಿಯು ಸ್ವತಂತ್ರ. ಅವನು ಗುಮಾಸ್ತೆಯಾಗಲಾರ. ಈ ಸಮಾಜದಲ್ಲಿ ಕವಿಗೆ ತಕ್ಕ ಕೆಲಸಗಳು ತುಂಬಾ ಕಡಮೆ. ಆದ್ದರಿಂದಲೇ ನಾನು ಯಾವ ಕೆಲಸಕ್ಕೂ ಅಂಟಿಕೊಂಡು ಇರಲಾರದೆ ಹೋದೆ. ಅದು ನನ್ನ ತಪ್ಪೇ ಇರ

ಬಹುದು. ಆದರೂ ಸಹ, ಈ ಪ್ರಪಂಚ ನನ್ನನ್ನು ಮೋಸಗೊಳಿಸಿದೆ. ಕವಿಯಾದರೆ 'ಭವ್ಯ ಭವಿಷ್ಯತ್ತು' ಉಂಟೆಂದು ನನ್ನನ್ನು ಪ್ರೇರೇಪಿಸಿ, ಕವಿಯಾಗಿ 'ಬದುಕಬಲ್ಲೆ'ನೆಂಬ ಸವಿಗನಸಿನಲ್ಲಿ ನನ್ನನ್ನು ದಬ್ಬಿತು.

**ದಾಸಪ್ಪ:** ನನ್ನ ಮಾತು ಕೇಳಿ. ಒಬ್ಬ ಕವಿ ಒಂದು ಕಡೆ ಹೇಳಿದ್ದಾರೆ—"ಕವಿ ತಾ ಹೇಳಿದ ಹಾಡನು ತಾ ಕಲಿತರದು ವೃಥಾ ಕಷ್ಟ" ಎಂದು. ಕವಿತಾಶಕ್ತಿ ಇರುವುದೇನೋ ಸರಿಯೆ. ಆದರೆ ಅದರಿಂದಲೇ ಬದುಕಬೇಕೆನ್ನುವುದು ತಪ್ಪಲ್ಲವೇ? ಅದೆಲ್ಲಾ ಹೋಯಿತ್ರಪ್ಪಾ! ಅದು ಯಾವ ಕೃಷ್ಣದೇವರಾಯರ ಕಾಲವೋ!

**ಕವಿ:** ನಿಜ! ಕವಿತೆಯು ಹೊಟ್ಟೆ ತುಂಬದ ಗಾಳಿ-ಕೂಳಾದರೂ ಕೀರ್ತಿ ಗಳಿಸೋದಕ್ಕೆ ಮಾತ್ರವೇ ಉಪಯೋಗವಾಯಿತು. ಆ ಕೀರ್ತಿಯನ್ನು ಜೀರ್ಣಿಸಿಕೊಳ್ಳಲಾರದೆ ನನ್ನ ಸಂಸಾರವೆಲ್ಲ ಮಾರಣಹೋಮವಾಗಿ ಹೋಯಿತು. [ಎದ್ದು ನಿಲ್ಲುವನು] ಹೆಂಡತಿ ಹೋದಳು; ಮಕ್ಕಳೆಲ್ಲಾ—ಒಬ್ಬರಾದ ಮೇಲೆ ಒಬ್ಬರು—ಹೋದರು. ಹಸಿವಿಗೆ, ರೋಗಗಳಿಗೆ ಆಹುತಿಯಾದರು. ಇನ್ನೇನಿದೆ? ಈ ಪ್ರಪಂಚದಲ್ಲಿ ನನಗೆ ಇನ್ನೇನು ಕೆಲಸ? ನನ್ನ ಕವಿತೆಯನ್ನು ಓದಿ, ಕೇಳಿ, ಆನಂದಿಸಿರಿ!....ಅಭಿನಂದಿಸಿರಿ! ಹೊಗಳು ಭಟರ ಈ ಪ್ರಪಂಚವು ನನ್ನ ಹೆಂಡತಿ ಮಕ್ಕಳಿಗೆ ಒಂದು ಗುಟುಕು ಗಂಜಿ ಸುರಿಯದೆ ಹೋಯಿತಲ್ಲವೇ? ನಮ್ಮನ್ನು ಬಾಳಗೊಡಿಸಿತೇ? ನನ್ನಾಕೆಯ ಮಾನರಕ್ಷಣೆಗೆ ಒಂದು ಹರಕು ಚಿಂದಿ ಕೊಡಲಾರದಾಯಿತು. ಈ ಪ್ರಪಂಚದಲ್ಲಿ ನನಗೇನು ಕೆಲಸ? ಇಲ್ಲಿ ನಾನು ಹೇಗಪ್ಪ ಬದುಕಿರಲಿ? [ದಾಸಪ್ಪ ನಗುತ್ತಾನೆ] ಯಾಕಪ್ಪಾ ಹಾಗೆ ನಗುತ್ತೀರಿ?

**ದಾಸಪ್ಪ:** ಬಾಳೆಂಬುದು ಈ ಪ್ರಪಂಚದಲ್ಲಿರದಿದ್ದರೆ ಮತ್ತೆಲ್ಲಿದ್ದೀತು? ಹಾಗಾದರೆ, ಈ ಕೊಠಡಿ, ಈ ಸೋಫಾ, ಈ ಕಾಫೀ—ಎಲ್ಲಕ್ಕೂ ಹೆಚ್ಚಾಗಿ ಈ ಸಿಗರೇಟು—ಇನ್ನೆಲ್ಲಾ ಬಿಟ್ಟು ಬಿಡಿ ಇನ್ನು!

**ಕವಿ:** ನನ್ನನ್ನು ಪರಿಹಾಸ್ಯ ಮಾಡುತ್ತಿದ್ದೀರಿ !

**ದಾಸಪ್ಪ:** ಪರಿಹಾಸ್ಯವಲ್ಲ. [ಕವಿಯ ಕಡೆ ತೋರಿಸಿ] ಕವಿಗಳೆಲ್ಲರೂ ಹೀಗೆ ಕಡ್ಡಿ-ಪೈಲ್ವಾನರಾಗುತ್ತಾರ್ಯೆ ? [ತನ್ನ ಕಡೆ ತೋರಿಸುತ್ತ] ಈ ಹಣೆಯ ಸುಕ್ಕುಗಳನ್ನು ನೋಡಿ. ಈ ಮುದಿ ದೇಹ ನೋಡಿ. ಈ ದೇಹ ಎಷ್ಟು ಕಷ್ಟಪಟ್ಟಿದೆ, ಗೊತ್ತೆ ? ಈ ಹೃದಯ ಎಷ್ಟು ಗಾಯಗೊಂಡಿದೆ, ಬಲ್ಲಿರಾ ? ಈ ಕಣ್ಣುಗಳು ಎಷ್ಟು ದಿನ ಕಣ್ಣೀರು ಸುರಿಸಿವೆ ! ಆದರೆ ನಾನು ನಿಮ್ಮಂತೆ ಅಂಜಿಕೆ-ಗುಳಿಗೆ ನುಂಗಲಿಲ್ಲ ! ನಿಮ್ಮಂತೆ ಪ್ರಪಂಚದಿಂದ ಓಡಿ ಹೋಗಲು ಪ್ರಯತ್ನಿಸಲಿಲ್ಲ. ಪ್ರಪಂಚದೊಡನೆ ಮುನಿಸಿಕೊಂಡು ನೀವೇನು ಸಾಧಿಸುವಿರಿ ? ಯಾರ ಮೇಲೆ ಈ ಸಿಟ್ಟು ? ಸಿಟ್ಟಾಗಿ ನಿಮ್ಮ ಸ್ವಶಕ್ತಿಯನ್ನೂ ಸ್ವಾತಂತ್ರ್ಯವನ್ನೂ ಕಳೆದುಕೊಳ್ಳುವಿರಾ ? ಕತ್ತಲೆ ಕೋಣೆಯಲ್ಲಿ ಕುಳಿತು ಕಣ್ಮುಚ್ಚಿಕೊಂಡು ಕಾಲ ಕಳೆಯಬೇಕೆಂದುಕೊಂಡಿದ್ದೀರಾ ? ಸೋಮಾರಿಗಳಂತೆ ಇದ್ದು ಹೋಗಬೇಕೆನ್ನುತ್ತೀರಾ ? ಈ ಪ್ರಪಂಚ ನಿಮ್ಮನ್ನು ಪೋಷಿಸಬೇಕೆ ? ಕವಿಯಾಗಿ ಬಾಳಲಾರದಿದ್ದರೆ, ಕೂಲಿಯಾಗಿ ಬಾಳಿ. ಅಷ್ಟೇ ಹೊರತು ಹೀಗೆ ಒಬ್ಬರ ಆಶ್ರಯದಲ್ಲಿ ತಲೆ ಕೊಟ್ಟು........!

**ಕವಿ:** ದಾಸಪ್ಪಾ !

**ದಾಸಪ್ಪ:** ಹೌದು ! ಒಳ್ಳೆಯದು ಹೇಳಿದರೆ ಎಲ್ಲರಿಗೂ ಕೋಪವೇ ! ಆಲೋಚಿಸುವವರೇ ವಿರಳ. ಒಳ್ಳೇದು! ನನಗ್ಯಾಕೆ ಬಂತು ಇದೆಲ್ಲ—ಬಡ ಗುಮಾಸ್ತೆಗೆ ! ಇದೋ ಹೊರಟೆ.

[ದಾಸಪ್ಪ ಹೊರಟು ಹೋಗುತ್ತಾನೆ. ಆಮೇಲೆ ಸಂಪತ್ ಬರುವನು]

**ಕವಿ:** ನಮಸ್ಕಾರ ! [ಕೈ ಮುಗಿಯುತ್ತಾನೆ]

**ಸಂಪತ್:** ನಮಸ್ತೆ [ಕೈ ಮುಗಿಯುವುದಿಲ್ಲ]....ಅಬ್ಬಬ್ಬ ! ಸಾಕಾಯ್ತಪ್ಪ ! ಈ ಸಮಾಜಗಳು, ಸಭೆಗಳು ! ಸುಮ್ಮನೆ ಇವರ ಮೆಹರ್ಬಾನಿಗಾಗಿ ಹೋಗಿ ಬರೋದು. ಕಿತ್ತು ತಿನ್ನಲು ಮೇಲೆ ಬಿದ್ದು ಬರುತ್ತಾರೆ. ಎಷ್ಟಕ್ಕೆಂತ ಅಧ್ಯಕ್ಷನಾಗಿರಲಿ ?! ಎಷ್ಟಕ್ಕೆಂತ ಸಹಾಯ ಸಲ್ಲಿಸಲಿ ?....ಇಗೋ, ಇದೇನೋ ನೋಡಿ ! ಯಾವುದೋ ಕನ್ನಡ

–ಸಾರಸ್ವತಾಭಿವರ್ಧಿನೀ ಸಮಾಜವೋ ಏನೋ ಅಂತೆ! [ಒಂದು ಕಾಗದವನ್ನು ಕವಿಗೆ ಕೊಡುತ್ತಾ] ಹೆಸರುಗಳಿಗೇನು—ಬಾರು ಬಾರುದ್ದ! ಕೆಲಸ ಮಾತ್ರ ಸೊನ್ನೆ !....ಅಂದಹಾಗೇಮರೆತೆ ನೋಡಿ. ಮೊನ್ನೆ ಆ ಸನಾತನ ಧರ್ಮೋದ್ಧಾರಕ ಸಮಾಜದವರು ನನ್ನನ್ನು ಅಧ್ಯಕ್ಷನಾಗಿ ಆರಿಸಿದ್ದಕ್ಕೆ ಸಮ್ಮತಿಯನ್ನು ಸೂಚಿಸಬೇಕೆಂದು ಬರೆದಿದ್ದರಲ್ಲಾ !

**ಕವಿ:** ಹೌದು.

[ಅದೇ ಹೊತ್ತಿಗೆ ಸರಿಯಾಗಿ ದಾಸಪ್ಪ ಲೆಕ್ಕದ ಪುಸ್ತಕಗಳನ್ನು ತಂದಿಟ್ಟು ಹೋಗುವನು]

**ಸಂಪತ್:** ನಮಗೆ ಮುಂಚಿತವಾಗಿ ತಿಳಿಸುವುದೂ ಇಲ್ಲ. 'ನಿಮ್ಮನ್ನು ಅಧ್ಯಕ್ಷರನ್ನಾಗಿ ಆರಿಸಿದ್ದೇವೆ'—ಎಂತ ಒಮ್ಮೆಲೇ ಬರೆದುಬಿಡುತ್ತಾರೆ. ನೋಡಿದರೆ ಈ ಸಮಾಜಗಳು ಮಾಡುವ ಕೆಲಸವೇನೂ ಇರಲಾರದು. ಡೊನೇಷನ್ ಕಿತ್ತು ತಿನ್ನುವ ಆಸೆಯಿಂದಲೇ ನಮ್ಮನ್ನು ಆಶ್ರಯಿಸುತ್ತಾರೆ—ಹದ್ದುಗಳ ಹಾಗೆ! ಈ ಕನ್ನಡದವರಿಗೂ ಒಂದು ಜವಾಬು ಬರೆದು ಬಿಡಿ. ನಿಮಗೆ ಪುಣ್ಯ ಬರುತ್ತೆ. ಇವುಗಳಿಗೆಲ್ಲ ನನಗೆಲ್ಲಿ ಬಿಡುವು ?

**ಕವಿ:** ಏನೆಂದು ಬರೆಯಬೇಕು ?

**ಸಂಪತ್:** ಅವರೇನು ಬರೆದಿದ್ದಾರೆ ?

**ಕವಿ:** [ಓದುತ್ತ] ಶ್ರೀಮಾನ್ ಧರ್ಮ ಪ್ರದೀಪರಾವ್ ಬಹದ್ದೂರ್ ಸಂಪತ್ ಕುಮಾರ್....

**ಸಂಪತ್:** ಹಾಹಾ ! ತಾಳಿ, ತಾಳಿ! ಅದೆಲ್ಲಾ ನನಗೆ ಬೇಕಿಲ್ಲ. ಸ್ಪಷ್ಟವಾಗಿ ಸ್ವಲ್ಪದರಲ್ಲಿ ಹೇಳಿ. ಅಧ್ಯಕ್ಷತೆಯೋ ? ಅರ್ಥಾಭಿಲಾಷೆಯೋ ?

**ಕವಿ:** [ಓದಿಕೊಂಡು]....ಸಹಾಯ ಬೇಕಂತೆ !

**ಸಂಪತ್:** ಸಹಾಯ ! ಡೊನೇಷನ್ ! ಕೊಡುಗೆ ! ಎಲ್ಲಿ ಸುರಿದಿಟ್ಟವೆ ? ಈ ಸುಡುಗಾಡು ಸಂಘ ಮಾಡುವುದಾದರೂ ಏನು ? ಈ ಡೊನೇಷನ್‌ಗಳಿಂದ ನಾನೇ ದಿವಾಳಿಯಾಗಬೇಕಾಗಿದೆ. ಹಾಳು ಸಂಘಗಳು !

**ಕವಿ:** ಹಾಗಾದರೆ ನಾನೇನು ಬರೆಯಲಿ ಅವರಿಗೆ?

**ಸಂಪತ್:** ಹೂ! ಬರೀರಿ. "ನಿಮ್ಮ ಸಂಘ ಎಂದು ಸ್ಥಾಪಿಸಿದಿರಿ? ಏಕೆ ಸ್ಥಾಪಿಸಿದಿರಿ? ಇದುವರೆಗೂ ಏನೇನು ಮಾಡಿದ್ದೀರಿ? ನಿಮ್ಮ ವರದಿ ನಮಗೆ ತೃಪ್ತಿಕರವಾಗಿದ್ದರೆ...."

**ಕವಿ:** ಅದು ಹಾಗಲ್ಲ. ನೀವು ಹೋದ ಸಲ ಅಧ್ಯಕ್ಷತೆ ವಹಿಸಿದ್ದಾಗ ಒಂದು ಸಾವಿರ ರೂಪಾಯಿ ಕೊಡುಗೆ ವಾಗ್ದಾನ ಮಾಡಿದ್ದಿರಂತೆ!

**ಸಂಪತ್:** ಆಂ!! ಒಂದು ಸಾ-ವಿ-ರ ರೂಪಾಯಿ ವಾಗ್ದಾನ ಮಾಡಿದ್ದೇನೆಯೇ!! [ತನ್ನ ಡೈರಿ ತೆಗೆದು ನೋಡಿಕೊಂಡು] ಓ! ಹೌದು. ಕಳೆದ 'ಜಾನ್ಯು-ವರೀ'ಯಲ್ಲಿ!—ಇಷ್ಟರಲ್ಲಿ ಏನಂತೆ ಮುಳುಗಿ ಹೋದದ್ದು! ಮ್ಯಾನರ್ಸ್ ತಿಳಿಯದ ಬ್ರೂಟ್ಸ್! ವಾಗ್ದಾನ ಮಾಡಿದ ಮೇಲೆ ಎಲ್ಲಾದರೂ ತಪ್ಪುತ್ತೇವೆಯೆ? ಸರಿ! ಬರೀರಪ್ಪ "ನೀವೇ ಬಂದು ತಗೊಂಡುಹೋಗತಕ್ಕದ್ದು" ಅಂತ. ಅಬ್ಬಬ್ಬ! ಇಂತಹ ಕೆಲಸಗಳನ್ನೆಲ್ಲಾ ಏನೋ ನೀವು ಮಾಡ್ತಾ ಇರೋದರಿಂದ ಸರಿ ಹೋಗಿದೆ. ಇಲ್ಲದಿದ್ದರೆ ಈ ಸಮಾಜಗಳಿಂದ, ಈ ಸಭೆಗಳಿಂದ ನನಗೆ ಹುಚ್ಚೇ ಹಿಡೀತಿತ್ತೋ ಏನೋ!........

**ಕವಿ:** ಹೌದು, ನಿಜ! ನನಗೂ ಜ್ಞಾಪಕವಿದೆ. ಆ ಸಮಾವೇಶಕ್ಕೆ ಕನ್ನಡ ಸಾಹಿತ್ಯದ ಮೇಲೆ ಒಂದು ಅಧ್ಯಕ್ಷೋಪನ್ಯಾಸ ಬರೆದು ಕೊಟ್ಟಿದ್ದೆ ನಾನು.

**ಸಂಪತ್:** ಹೌದು. ಹೌದು. [ದಾಸಪ್ಪ ಕೆಲವು ಹೊಸ ಪುಸ್ತಕಗಳನ್ನು ತೆಗೆದುಕೊಂಡು ಬರುತ್ತಾನೆ] ಏನದು?

**ದಾಸಪ್ಪ:** ಪುಸ್ತಕಗಳು

**ಸಂಪತ್:** ಯಾರಿಗೆ?

**ದಾಸಪ್ಪ:** ನಮಗೇ!

**ಸಂಪತ್:** ಎಲ್ಲಿಯವು?

**ದಾಸಪ್ಪ:** ಟಪ್ಪಾಲಿನಿಂದ ಬಂದುವು.

**ಸಂಪತ್:** ಯಾವ ಪುಸ್ತಕಗಳು ಅವು?

**ದಾಸಪ್ಪ:** ಅದೇನೋ ನಾನು ಓದಲಿಲ್ಲ.

ಕವಿ: ನಾನೇ ಕೆಲವು ಪುಸ್ತಕಗಳಿಗೆ 'ಆರ್ಡರ್' ಕೊಟ್ಟಿದ್ದೆ. [ಎದ್ದು ಪುಸ್ತಕಗಳನ್ನು ನೋಡುತ್ತಾ] ಅವೇ ಇರಬಹುದು.

ದಾಸಪ್ಪ: ಹೌದು, ಆ ಪುಸ್ತಕಗಳೇ!

ಸಂಪತ್: ಓಹೋ! ಹಾಗೇನು! [ಪುಸ್ತಕಗಳನ್ನು ನೋಡಿ ಮೇಜಿನ ಮೇಲಿಡುತ್ತಾ] ಈ ರೀತಿ ಪುಸ್ತಕಗಳನ್ನು ಕೊಂಡು ಬಿಸಾಡಲು ನಮ್ಮ ಮನೇಲಿ ಯಾರಾದರೂ ಇದ್ದೇ ಇರ್‍ತಾರೆ! ನಮ್ಮ ತಂದೆಯುವರಿಗೆ....ಪುಸ್ತಕಗಳೆಂದರೆ ಬಲು ಶ್ರದ್ಧೆ! ನಮ್ಮ ಮನೇಲಿ ನೋಡಿದ್ದೀರಲ್ಲಾ ಆ ದೊಡ್ಡ ಲೈಬ್ರೆರಿ? ಅದೆಲ್ಲಾ ನಮ್ಮ ತಂದೆಯವರು ಕೊಂಡದ್ದೇ! ಇದ್ದಷ್ಟು ಕಾಲವೂ—"ಆ ಪುಸ್ತಕಗಳನ್ನು ಓದಿರೋ" ಅಂತ ಅವರದು ಒಂದೇ ಕೂಗು! ನಮ್ಮ ಶೋಭಾ ಮಾತ್ರ........ ಅವೆಲ್ಲಾ ಓದ್ಬಿಟ್ಟಿದಾಳೆ! ನನಗೆಲ್ಲಿ ಬಿಡುವು?........[ದಾಸಪ್ಪನನ್ನು ಕುರಿತು] ಎಷ್ಟಾಯಿತು?

ದಾಸಪ್ಪ: ಇಪ್ಪತ್ತೈದು ರೂಪಾಯಿ.

ಸಂಪತ್: ಸರಿ ಹಾಗಾದರೆ. [ರಂಗನು ವಿದೇಶೀ ಮದ್ಯದ ಸೀಸೆ, 'ಸೋಡಾ', ಲೋಟಗಳನ್ನು ತಂದಿಟ್ಟು ಹೋಗುವನು. ದಾಸಪ್ಪನೂ ಹಿಂದೆಯೇ ಹೊರಡುವನು.]

ಸಂಪತ್: ಕವಿಗಳೇ! ಹೊಸ ಪುಸ್ತಕ ಏನಾದರೂ ಬರೀತಾ ಇದ್ದೀರಾ?

ಕವಿ: ಪ್ರಾರಂಭ ಹೇಗೆ ಮಾಡಬೇಕೆಂತ ಆಲೋಚಿಸ್ತಾ ಇದ್ದೇನೆ!

ಸಂಪತ್: ಏನು ಬರೆದರೆ ತಾನೇ ಏನು ಪ್ರಯೋಜನ? ಹಾಗೆ ಮೂಲೆಗೆ ಹಾಕಿಡುವುದಕ್ಕೆ ಯಾಕೆ ಬರೆಯಬೇಕು? ನಿಮ್ಮ ಮನಸ್ಸಿನಲ್ಲಿ ಏನಿದೆಯೋ ತಿಳೀದು. ನೀವಾಗಿಯೇ ಏನಾದರೂ ಹೇಳುತ್ತೀರೆಂದು ಕಾದು ನೋಡಿದೆ. ಉಪಯೋಗವಿಲ್ಲದೆ ಹೋಯ್ತು. ನೋಡಿ! ಅಚ್ಚಾಗಿ, ಪ್ರಪಂಚದಲ್ಲಿ ಪ್ರಚಾರವಾಗಿ, ನಾಲ್ಕು ಜನ ಓದುವುದಕ್ಕೆ ಅಲ್ಲದಿದ್ದರೆ ಮತ್ತ್ಯಾಕೆ ಬರೆಯಬೇಕು?....ಏನಂತೀರಿ? ಹೇಳಿ. ಇದುವರೆಗೆ ಯಾವುವೋ "ಎರಡು ಪುಸ್ತಕಗಳು ಪೂರ್ತಿಯಾಗಿವೆ" ಎಂದಿದ್ದಿರಲ್ಲಾ. ಅವೆರಡನ್ನೂ ಇಲ್ಲಿ ಕೊಡಿ. ನೀವು ಕೇಳದಿದ್ದರೂ ಕೂಡ ನಾನೇ ಅಚ್ಚು ಹಾಕಿಸ್ತೀನಿ.

ಕವಿ: [ಸಾನಂದಾಶ್ಚರ್ಯದಿಂದ] ನನ್ನ ಪುಸ್ತಕಗಳನ್ನೇ?! ಅಚ್ಚು ಹಾಕಿಸುವಿರಾ?!

ಸಂಪತ್: ಹೌದು. ಯಾಕೆ, ಅಚ್ಚುಹಾಕಿಸುವವರೆಲ್ಲಾ ಏನು ಮಹಾ— ನಿಮಗಿಂತ ಹೆಚ್ಚು ಎಂದು ತಿಳಿದುಕೊಂಡಿದ್ದೀರಾ? ಈ ಕಾಲದಲ್ಲಿ ಪ್ರೆಸ್ಸುಗಳು ಹೆಚ್ಚಿದಷ್ಟೂ ಕಸದಬುಟ್ಟಿಗೆ ಸೇರಬೇಕಾದ ಪ್ರತಿ ಯೊಂದು ಪುಸ್ತಕವೂ ಅಚ್ಚಾಗಿ ಹೋಗುತ್ತಿದೆ. ಇನ್ನೂ ಒಂದು ಗುಟ್ಟು ಹೇಳ್ತೀನಿ, ಕೇಳಿ. ಬರೆದ ಪುಸ್ತಕ ಆಗಿಂದಾಗಲೇ ಅಚ್ಚು ಹಾಕಿಸೋದು ಒಳ್ಳೇದು. ಯಾಕೆಂದರೆ, ಇನ್ನು ಸ್ವಲ್ಪ ಕಾಲಕ್ಕೆ ಯಾರೋ ಬೇರೊಬ್ಬ ಕವಿಗೆ ಇದೇ ಐಡಿಯಾ ಬಂತೆಂದು ತಿಳಿದು ಕೊಳ್ಳಿ. ಆಗ ಆತನು ಅವನ್ನು ಬರೆದು ಅಚ್ಚುಹಾಕಿಸಿದ ಎಂದು ಕೊಳ್ಳಿ. ಆಗ ನಿಮ್ಮದೇನಾಗುತ್ತೆ? ಪೂರ್ತಿ ಕಾಪಿ ಅಂತೀರಾ?! ಕವಿಯಾಗಿದ್ದು ನಿಮಗೆ ಇಷ್ಟು ಮಾತ್ರ ತಿಳೀದು—ಎಂದರೆ ತುಂಬಾ ಶೋಚನೀಯ. 'ಅಚ್ಚಾದರೆ ಸಾಕಪ್ಪಾ ದೇವರೇ!' ಎಂತ ಬಾಯಿ ಬಿಡೋ ಕವಿಗಳು ಎಷ್ಟು ಜನ ಇಲ್ಲ?! ಅವೆರಡೂ ಏನು ಕಾದಂಬರಿಗಳೇ?

ಕವಿ: ಅಲ್ಲ. ಒಂದು ಪದ್ಯ ಕಾವ್ಯ. ಇನ್ನೊಂದು ಹಾಡಿನ ಸಂಪುಟ.

ಸಂಪತ: ಹಾ! 'ಪ್ರಣಯ ಜ್ವಾಲೆ' ಎಂತಲ್ಲವೇ ಅದರ ಹೆಸರು? ತುಂಬಾ ಚೆನ್ನಾಗಿದೆ. ಒಂದೆರಡು ಗೀತೆ ನಮ್ಮ ಶೋಭಾ ಹಾಡೋದು ಕೇಳಿದ್ದೇನೆ. ಅಂಥ ಸಾಹಿತ್ಯ ನುಸಿಹಿಡಿದು ಹೋ ಗೋದು ನನಗೆ ಸರ್ವಥಾ ಇಷ್ಟವಿಲ್ಲ....ಏನು ಹೇಳಿ, ಪ್ರೆಸ್ಸಿಗೆ ಕಳಿಸಿಬಿಡಲೆ?

ಕವಿ: ಕ್ಷಮಿಸಿ ಸಾಹುಕಾರರೇ! ನನ್ನ ಹೆಸರು ಪ್ರಕಟವಾಗುವುದು ನನಗೆ ಇಷ್ಟವಿಲ್ಲ. ನಾನು ಮರೆತುಬಿಟ್ಟ ಆಸೆಗಳನ್ನ ಪುನಃ ಯಾಕೆ ಜ್ಞಾಪಿಸಿಕೊಡುತ್ತೀರಿ? ಈಗಾಗಲೇ ವಾಸಿಯಾಗಿರುವ ನನ್ನ ಮನಸ್ಸಿನ ಗಾಯಗಳನ್ನ ಮತ್ತೆ ಕೆದಕಬೇಡಿ. ನನಗೆ ಬೇಕಾಗಿಲ್ಲ. ನಾನು ಹೀಗೆಯೇ ಬದುಕಿ-ಸತ್ತರೆ ಸಾಕಾಗಿದೆ!

**ಸಂಪತ್:** ನನ್ನನ್ನು ನೀವು ನೋಡೋದಕ್ಕೆ ಬಂದ ದಿವಸ ಹೇಗಿದ್ದೀರೋ ಈಗಲೂ ಹಾಗೆಯೇ ಇದ್ದೀರಿ. ಏನೋರಪ್ಪ! ನಿಮ್ಮಿಷ್ಟ! ಇಗೊಳ್ಳಿ, ರಘು! ನೀವು ಬುದ್ಧಿವಂತರು, ಅಭಿವೃದ್ಧಿ ಪಡೆಯೋರು, ಅಂತ ನಿಮ್ಮನ್ನು ನೋಡಿದ ಕೂಡಲೇ ನನಗೆ ಅನಿಸ್ತು. ಹಾಗೆಂತಲೇ ನಿಮ್ಮನ್ನು ಇಲ್ಲಿಟ್ಟುಕೊಂಡೆ. ಹಿಂದೆ ನಡೆದದ್ದನ್ನೆಲ್ಲಾ ಮರೆಯಲು ಅನುಕೂಲವಾಗುವಂತೆ ಒಳ್ಳೆಯ ವಾತಾವರಣ ಇರಲಿ ಎಂತಲೇ, ನಮ್ಮ ಮನೇಲೇ ಇರಗೊಡಿಸ್ದೆ. ಆದರೆ....ಅದೇಕೋ ಏನೋ ನಿಮ್ಮ ನಿರಾಶೆ ಮಾತ್ರ ಇನ್ನೂ ಹೋಗಿಲ್ಲ. ಈ ಮನೇಲಿ ನಿಮಗೆ ಏನಾದರೂ ಕಷ್ಟವಾಗುತ್ತೆಯೇ? ಹಾಗಿದ್ದರೆ ಹೇಳಿ.

**ಕವಿ:** [ಹೆಚ್ಚು ವಿನಯದಿಂದ] ಅಯ್ಯೋ! ಹಾಗೇನೂ ಇಲ್ಲ! ಕ್ಷಮಿಸಿ. ನನಗೆ ಅಂತಹ ತೊಂದರೆ ಏನೂ ಇಲ್ಲ. ನನ್ನಲ್ಲಿ ನೀವಿಟ್ಟಿರುವ ಅಭಿಮಾನಕ್ಕಾಗಿ ನಾನು ತಮಗೆ ಜನ್ಮಾವಧಿ ಕೃತಜ್ಞ.

**ಸಂಪತ್:** ಅಯ್ಯೋ! ಬಿಡಿ ಅದೆಲ್ಲಾ. ನಮ್ಮನೇ....ಕಾಲಕಾಲಕ್ಕೂ ಹೀಗೇ! ಸಂಸ್ಥಾನ! ನಡೀತಾ ಇದೆ! ನಮ್ಮ ತಂದೆಯವರಿಗೆ ಕವಿ ಪೋಷಣೆ, ಸನ್ಮಾನ, ಕಾವ್ಯವಾಚನ, ಸಾಹಿತ್ಯ ಸಮಾರಂಭಗಳೆಂದರೆ **ತುಂ**....ಬಾ ಶ್ರದ್ಧೆ! ನನಗೆ ಇನ್ನೂ ಚೆನ್ನಾಗಿ ಜ್ಞಾಪಕ ಇದೆ. ಅವರ ಹಿಂದೆ ಯಾವಾಗಲೂ ಒಬ್ಬ ಪಂಡಿತರು ಇದ್ದೇ ಇರ್ತಿದ್ದರು. ಆತ, ಒಂದು ಚಿಟಿಕೆ ನಶ್ಯ ಮೂಗಿಗೆ ಏರಿಸಿ ಗಳಗಳನೆ ನೂರಾರು ಕಂದ ಪದ್ಯಗಳನ್ನು ನಿಂತ ಕಡೆ ಕಟ್ಟಿ, ಹಾಡಿ, ಹೊಗಳುತಿದ್ದರು ತಂದೇನ!

**ಕವಿ:** ಬಹಳ ಒಳ್ಳೆಯವರೇ ಹಾಗಾದರೆ!

**ಸಂಪತ್:** ಅಯ್ಯೋ! ಅವೆಲ್ಲ ಹಳೆಯ ಕಾಲಗಳಲ್ಲವೇ? ಈಗಲೂ ಅಂತಹ ಕವಿಗಳು ಇಲ್ದೆ ಇಲ್ಲ. ಆದರೆ—ರಖಂ ಸ್ವಲ್ಪ ಬದಲಾಯಿಸಿದೆ, ಅಷ್ಟೆ! ಹಾಗಾದರೆ ಅಚ್ಚು ಹಾಕಿಸೋದು ಬೇಡ ಅಂತೀರಾ?

**ಕವಿ:** ಕ್ಷಮಿಸಿ ಸಾಹುಕಾರರೇ! ನಿಮ್ಮ ಮಾತಿಗೆ....ಬೇಡ ಅಂತೀನೆಂದು ತಿಳಕೋಬೇಡಿ.

**ಸಂಪತ್:** ಹೋಗಲಿ ಬಿಡಿ. ನಿಮಗೆ ಇಷ್ಟವಿಲ್ಲದಿದ್ದರೆ ಬೇಡ. ಹಾಗೇ ಇರಲಿ. ಆ ಪುಸ್ತಕಗಳಾದರೂ ಕೊಡಿ. ಓದಿಯಾದರೂ ಓದ್ತೋಣ ಒಂದು ಸಲ.

**ಕವಿ:** ಶೋಭಾ ಹತ್ತಿರ ಇವೆ, ತರಿಸಲೇ?

**ಸಂಪತ್:** ಹಾಗಾದರೆ ಬೇಡ, ಬೇಡ. ನಾನೇ ತಗೋತೇನೆ. [ದಾಸಪ್ಪ ಬರುತ್ತಾನೆ]

**ದಾಸಪ್ಪ:** ನಿಮಗಾಗಿ....

**ಸಂಪತ್:** ಯಾರು?

**ದಾಸಪ್ಪ:** ಅಚ್ಚುಕೊಟದಾತ. ಒಳಕ್ಕೆ ಕರೆಯಲೇ?

**ಸಂಪತ್:** [ಕವಿಯೊಡನೆ] ನೋಡಿದಿರಾ? ಪ್ರೆಸ್‌ನವನಿಗೆ ಕೂಡ ಬರ ಹೇಳಿದ್ದೆ. ನೀವು 'ಬೇಡ' ಅಂತೀರಿ. ನಾನೇನು ಮಾಡಲಿ ದಾಸಣ್ಣಾ? ಈ ನಮ್ಮ ಕವಿ–ರಘು-ಎಷ್ಟು ಹೇಳಿದರೂ ಕೇಳೋದಿಲ್ಲ. ಬೇಡ! ಅವನಿಗೆ 'ಹೋಗು' ಅಂತ ಹೇಳು.

**ದಾಸಪ್ಪ:** ಪುಸ್ತಕಗಳು ಪೂರ್ತಿಯಾಗಿವೆಯಂತೆ. ನೀವು ಒಂದು ಸಲ ನೋಡಿ 'ಬಿಲ್ಲು' ಸಲ್ಲಿಸ್ತೀರೇನೋ ಅಂತ ಕೇಳೋದಕ್ಕೆ ಇಲ್ಲಿಗೆ ಬಂದಿದ್ದಾನೆ.

**ಕವಿ:** [ಸಂಪತ್ ಕಡೆ ತಿರುಗಿ] ಯಾವ ಪುಸ್ತಕಗಳು ಅವು?

**ಸಂಪತ್:** ಯಾವುವೋ ರಸೀತಿ ಪುಸ್ತಕಗಳು [ದೃಷ್ಟಿಯನ್ನು ದೂರಕ್ಕೆ ಹಾಯಿಸುತ್ತ] ಕತ್ತೆ! ಅವನು ಅವಿವೇಕಿ! ಆ ಬಿಲ್ಲನ್ನು ಆಫೀಸಿಗೆ ಕಳಿಸು ಅಂತ ಹೇಳು. ಇಲ್ಲಿಗ್ಯಾಕೆ ತಂದನಂತೆ?

**ದಾಸಪ್ಪ:** ಅಲ್ಲ, ಅಲ್ಲ! ಅದು ಏನೋ....!

**ಸಂಪತ್:** ಚೆನ್ನಾ....ಯಿತು! ಎಲ್ಲಾ—ತಿಳಿದಿರೋ ಹಾಗೆ ಮಾತಾಡ ಬೇಕಾಗಿಲ್ಲ. ಅವನಂತೂ ಸರಿಯೇ ಸರಿ. ನಿನಗೂ ಅರುಳೋ ಮರುಳೋ ಆಗಿದೆಯೇನು? ಹುಚ್ಚು ಹಿಡಿಯಿತೇನು?

**ದಾಸಪ್ಪ:** [ಬೇಸರದಿಂದ] ಈ ಕಾಲದಲ್ಲಿ ಮುದುಕರಿಗೇ ಹಿಡಿಯುತ್ತೆ ಹುಚ್ಚು!

[ಸಂಪತ್ ಮುರುಗುಟ್ಟಿಕೊಂಡು ನೋಡುತ್ತಾನೆ. ದಾಸಪ್ಪ ಹೋಗುತ್ತಾನೆ]

**ಸಂಪತ್:** ಓಃ! ನಾಲ್ಕು ಗಂಟೆ ಆಗಿಹೋಯಿತು !

[ಚನ್ನಯ್ಯ ಓಡಿಬರುತ್ತಾನೆ]

**ಚನ್ನಯ್ಯ:** ಸಾವ್ಕಾರ್ರೇ ! ಅನಾಉತ ! ಅನಾವ್ತ ! ಅಕ್ಸಿಡಂಟಾಗೋಯ್ತು !

**ಸಂಪತ್:** ಏನಾಯ್ತೋ ?

**ಚನ್ನಯ್ಯ:** ಮಿಷನ್‌ಗೆ ಸಿಕ್ಕಿ ಈರೈನ ಕೈ ಮುರಿದೋಯ್ತು ! ರಕ್ತ ಕಾಲಿವೆಗಳೇ ಹರಿದೋಯ್ತು ! ಮೈ ಮ್ಯಾಲೆ ಪೆಗ್ನೆಯೇ ಇಲ್ದೆ ಬಿದ್ದಿದ್ದಾನೆ.

**ಸಂಪತ್:** [ಗಂಭೀರವಾಗಿ ಕುಳಿತು, ಸಿಗರೇಟು ಹಚ್ಚಿ ಹೊಗೆ ಬಿಡುತ್ತಾ] ಏನು ಮಾಡಿಕೊಂಡನೋ ಆ ಬಡ್ಡೀಮಗ ?

**ಚನ್ನಯ್ಯ:** ಅವನೇನು ಮಾಡ್ಕೋತಾನೆ ಸಾವ್ಕಾರ್ರೆ! ಅವ್ನ ಕೈ ಮುರ್ದೋಯ್ತು. ಅವ್ನ ಎಂಡ್ತಿ-ಮಕ್ಳು ಗೋಳಾಡ್ತಾ ಇದಾರೆ. ನೀವೊಂದ್ಸಲ ದಯ್ಮಾಡ್ಸಿ. ಇನ್ನೂ ಆಸ್ಪತ್ರೆಕ್ಕೂಡ ತಗೊಂಡೋಗಿಲ್ಲ. ಹಾಗೇ ಬಿದ್ದಿದಾನೆ. ಅದೇನು ಗ್ರಾಚಾರವೋ ಏನೋ !

**ಸಂಪತ್:** ಮೆಷಿನ್ನಲ್ಲಿ ಏನೂ ದೋಷವಿಲ್ಲಾಷ್ಟೆ ?

**ಚನ್ನಯ್ಯ:** ಅದು ಯಾವುದೂ ನೋಡ್ಲಿಲ್ಲ ಸಾವ್ಕಾರ್ರೆ ! ಅವ ಬಿದ್ದ. ಎಲ್ರೂ ಒಂದೇ ಕೂಗಾಕ್ಬಿಟ್ರು. ನಂಗೆ ದಿಕ್ಕೇ ತೋಚಲ್ಲ. ನಿಮ್ಮತ್ರ ಓಡಿ ಬಂದೆ.

**ಸಂಪತ್:** ಹಾಗಾದ್ರೆ ತಪ್ಪು ಯಾರದು ?

[ಕವಿ ಈ ಪ್ರಶ್ನೆಯನ್ನು ಕೇಳಿ ಆಶ್ಚರ್ಯಚಕಿತನಾಗುತ್ತಾನೆ]

**ಚನ್ನಯ್ಯ:** ............! [ವಿಸ್ಮಯ ಆಶ್ಚರ್ಯದ ಪ್ರದರ್ಶನ]

**ಸಂಪತ್:** ಕೆಲ್ಸ ಷುರುವಾಗೋಕೆ ಮುಂಚೆ ಎಲ್ಲಾ ಮೆಷಿನ್ ನೋಡಿದ್ದೀರೇನೋ ?

**ಚನ್ನಯ್ಯ:** ನೋಡಿದ್ವಿ; ಆಗೆಲ್ಲಾ ಸರ್ಯಾಗಿತ್ತು.

**ಸಂಪತ್:** ಹಾಗಾದ್ರೆ ಆಕ್ಸಿಡೆಂಟ್ ಹೇಗಾಯ್ತು ?

**ಚನ್ನಯ್ಯ:** ಅವ್ನ ಕರ್ಮ ! ನನ್ಕೇಳಿದ್ರೆ ನಾನೇನೇಳ್ಲಿ ?

**ಸಂಪತ್**: ಮೆಕ್ಯಾನಿಕ್ ಆಗಿದ್ದೂ ಮೆಷಿನ್ ದೋಷಗಳು ನಿನಗೆ ಗೊತ್ತಿಲ್ಲವೇ ? ಚೆನ್ನಾಯ್ತು; ಹು ! ಇರಲಿ ! ನೀನ್ ನಡಿ; ನಾನ್ ಬರ್ತೇನೆ.

**ಚನ್ನಯ್ಯ**: ಒಳ್ಳೇದು ಸಾವ್ಕಾರ್ರೆ. [ಚನ್ನಯ್ಯ ಹೋಗುತ್ತಾನೆ]

**ಸಂಪತ್**: [ಕುಡಿದು] ಹೆಂಡ-ಕುಡುಕ-ಬಡ್ಡೀಮಕ್ಳು ! ಕುಡಿದು ಬಂದು ಮೈಮೇಲೆ ಪ್ರಜ್ಞೆ ಇಲ್ಲದೆ ಕೆಲಸ ಮಾಡ್ತಾರೆ. ಕೈ ಕತ್ರಿಸ್ದೆ ಯಾಕಿದ್ದೀತು ? ಮದ-ಬಡ್ಡೀಮಕ್ಳಿಗೆ !

**ಕವಿ**: ಬೇಗ ಹೋಗಿ ಪಾಪ ! ಅದೇನು ಪ್ರಮಾದವಾಗಿದೆಯೋ ಏನೋ !

**ಸಂಪತ್**: ಫ್ಯಾಕ್ಟರೀ ಅಂದಮೇಲೆ ಇಂಥಾದ್ದೆಲ್ಲ ಜರುಗೋದೇ ! [ಸಂಪತ್ ಹೋಗುತ್ತಾನೆ]

[ದಾಸಪ್ಪ ಪುಸ್ತಕಗಳನ್ನು ತೆಗೆದುಕೊಂಡು ಹೋಗಲು ಬರುತ್ತಾನೆ]

**ದಾಸಪ್ಪ**: ಏನ್ರಪ್ಪ ಸಮಾಚಾರ? ಹಾಗೆ....ನೋಡತಾ ಇದ್ದೀರಿ!

**ಕವಿ**: ಫ್ಯಾಕ್ಟರೀಲಿ ಏನೋ ಅಪಘಾತವಾಯಿತಂತೆ.

**ದಾಸಪ್ಪ**: ನಮ್ ಫ್ಯಾಕ್ಟರೀಲೆ ?

**ಕವಿ** ಹೌದು.

**ದಾಸಪ್ಪ**: ನಮಗೇನೂ ಪ್ರಮಾದಗಳಿಲ್ಲವಷ್ಟೆ ?

**ಕವಿ**: ಯಾರೋ ಪಾಪ ! ವೀರಯ್ಯನಂತೆ. ಕೂಲಿಕಾರ. ಅವನ ಕೈ ಮುರಿದುಹೋಯ್ತಂತೆ. ಸಾಹುಕಾರರೂ ಕೂಡಾ ಹೋಗಿದ್ದಾರೆ.

**ದಾಸಪ್ಪ**: ಅಯ್ಯೋ! ಇವರು ಹೋದರೆ ತಾನೇ ಏನಾಗುತ್ತೆ ? ಮುರಿದ ಕೈ ಕೂಡಿಸುತಾರೆಯೇ? ತಪ್ಪು ಯಾರದು-ಅಂತ ವಿಚಾರಿಸಿಕೊಂಡು ಬರತಾರೆ. ಅಷ್ಟೆ ತಾನೇ!

**ಕವಿ**: [ಆಶ್ಚರ್ಯಚಕಿತನಾಗಿ] ಅಷ್ಟೇನೇ ?!

**ದಾಸಪ್ಪ**: ಅಷ್ಟಲ್ಲದೆ ಮತ್ತೇನ್ರಪ್ಪಾ! ಕೈ, ಅದೇನು ಸುಮ್ಮಸುಮ್ಮನೆ ಮುರಿಯಿತೇ ? ಯಾರದೋ ತಪ್ಪು ಇರಲೇಬೇಕಷ್ಟೆ ? ಯಜಮಾನರಾದವರು ಮೊದಲು ವಿಚಾರಿಸಬೇಕಾದ ವಿಷಯಾನೇ ಅದು ?

ಆದರೂನೂ, ಇದೆಲ್ಲಾ.... ನಮಗ್ಯಾಕೇಳಿ? [ದಾಸಪ್ಪ ಹೋಗುತ್ತಾನೆ]
[ಸೀಸೆ, ಲೋಟಗಳನ್ನೊಯ್ಯಲು ರಂಗ ಬರುತ್ತಾನೆ]

ರಂಗ: ಸಾವ್ಕಾರ್ರು ಓದ್ರೇ, ಕವಿಗಳೇ ?

ಕವಿ: ಕಾರಖಾನೆಗೆ ಹೋದರು. ಅಲ್ಲೇನೋ ಪ್ರಮಾದವಾಗಿದೆಯಂತೆ.

ರಂಗ: ಏನ್ರಾಯ್ರೆ? ಫ್ಯಾಕ್ಟರೀಗೆ ಬೆಂಕಿ ಬಿತ್ತೆ ?!

ಕವಿ: ಇಲ್ಲ, ಇಲ್ಲ.

ರಂಗ: ಹಾಗಾದರೆ ಕಾರು ಡ್ಯಾಷಾಯಿತೆ ?

ಕವಿ: ಅಲ್ಲವಯ್ಯ ಮೆಷಿನ್ನಿಗೆ ಯಾರೋ ಒಬ್ಬ ಕೂಲಿಕಾರನ ಕೈ ಸಿಕ್ಕಿ, ಮುರಿದುಹೋಯಿತಂತೆ.

ರಂಗ: [ಆಶ್ಚರ್ಯಚಕಿತನಾಗಿ] ನಿಜವಾಗಿ ?

ಕವಿ: ಹೌದಪ್ಪ, ಯಾರೋ ಪಾಪ ! ವೀರಯ್ಯನಂತೆ.

ರಂಗ: [ದಿಗ್ಭ್ರಮೆಯಿಂದ] ಆಂ ! ಈರಯ್ಯ ? [ಸೀಸೆ ಲೋಟಗಳು ಕೆಳಗೆ ಬೀಳುವುವು] ಅಯ್ಯೋ ! ಅಪ್ಪಾ ! ಅಪ್ಪಾ ! [ಓಡಿಹೋಗುವನು]

## ದೃಶ್ಯ ೨

[ಸಂಪತ್ ಬಂಗಲೆಯಲ್ಲಿ ಕೊಠಡಿ. ಸಂಪತ್ "ಪೈಪ್" ಸೇದುತ್ತ ಶತಪಥ ತುಳಿಯುತ್ತಿದ್ದಾನೆ. ಚನ್ನಯ್ಯ ಒಂದು ಪಾರ್ಶ್ವದಲ್ಲಿ ನಿಂತಿದ್ದಾನೆ.]

**ಸಂಪತ್:** ಹಾಗಾದರೆ ಏನಂತಿ ?

**ಚನ್ನಯ್ಯ:** ಅನ್ನೋದೇನಿದೆ, ಸಾವ್ಕಾರ್ರೆ ? ನಿಮ್ಗೆ ತಿಳೀದೆ ?

**ಸಂಪತ್:** ಅದೇ ಅದೇ ! ನಮಗೆ ಎಲ್ಲಾ ತಿಳಿಯೋದು ! ಯಾವುದೂ ತಿಳೀದೇ ಇಲ್ಲಾ ಅಂತ ಈಗಾದ್ರೂ ನೀವು ತಿಳ್ಕೊಂಡಿದ್ದೀರಾ ?

**ಚನ್ನಯ್ಯ:** ನೀವೇ ಏಳ್ಬೇಕೆ ಸಾವ್ಕಾರ್ರೆ ? ಎಂದೋ ತಿಳಕೊಂಡಿದೇವೆ.

**ಸಂಪತ್:** ಲೋ ! ಇಲ್ನೋಡು ! ನಿಮ್ಮಪ್ಪ ಹೋಗೋ ವೇಳೆಗೆ ನೀನು ಇನ್ನೂ ಚಿಕ್ಕವನು. ನಿಮ್ಮಪ್ಪ ನಮ್ಮಲ್ಲಿ ಕೆಲಸ ಮಾಡುತ್ತಿದ್ದ. ನಮ್ಮೇಲೆ ಅವನಿಗೆ ಎಷ್ಟೋ ಅಭಿಮಾನ. ನಂಬಿಗಸ್ಥ ! ನೀನೂ ಆ ರೀತಿ ಅಭಿಮಾನ ಇಟ್ಟುಕೋಬೇಕು. ಮನುಷ್ಯ ಅಂದ ಮೇಲೆ ಕೃತಜ್ಞತೆ ಇರಬೇಕು.

**ಚನ್ನಯ್ಯ:** ಒಳ್ಳೇದು ಸಾವ್ಕಾರ್ರೇ ! ನಮ್ಮೊಳ್ಗೆ ಆ ವಂದ್ಗುಣ ಮಾತ್ರ ಬೇಕಾದಷ್ಟಿದೆ !

**ಸಂಪತ್:** ಸರಿ, ಹಾಗಾದರೆ ! ವೀರಯ್ಯನಿಗೆ ಆದ ಆಕ್ಸಿಡೆಂಟ್‌ನಿಂದ ನನಗೆ ಬಹಳ ತೊಂದರೆ ಆಗಿದೆ ಕಣೋ ! ಅವನಿಗೆ ಜೀವಾವಧಿ ಸಹಾಯ ಕೊಡಬೇಕೆಂತು ನಿಯಮ ಇದೆ !

**ಚನ್ನಯ್ಯ:** ಸಾವ್‌ಕಾರ್ರೆ ! ಪಾಪ ಅವ್ನು ಮಕ್ಳೊಂದಿಗ. ಇನ್ಮೇಲೆ ಅವ್ನ ಕಷ್ಟ-ಸುಖ ನೀವಲ್ದೆ ಮತ್ಯಾರ್ ಇಚಾರ್‌ಸೋದು ? ಪಾಪ ! ಬಡ್‌ವಂಗೆ ಅಷ್ಟು ಮಾತ್ರ ಮಾಡ್ಬಿಡಿ ಸಾವ್ಕಾರ್ರೆ !

**ಸಂಪತ್:** ಅಲ್ಲ, ಚನ್ನಯ್ಯಾ ! ಈ ಲೋಕದಲ್ಲಿ ಯಾರಿಗೆ ಯಾರು ಆಗುತಾರಯ್ಯ ! ನಾವೆಲ್ಲ ಸುಮ್ಮನೆ ಅಂದುಕೊಳ್ಳೋದೇ ಹೊರ್ತು

ನಮಗೆ ತಿಳೀದೇನೇ ಎಷ್ಟೋ ನಡೆದು ಹೋಗುತ್ತೆ. ಈಗ ವೀರಯ್ಯನ ಕೈ ಮುರಿದೇ ಹೋಯಿತು. ತಪ್ಪು ಯಾರದಾದರೇನು? ಕೈಯೇನೋ ಮುರಿದು ಹೋಯಿತು. ಇನ್ನು ಮುಂದಿನ ವಿಷಯ ಆಲೋಚಿಸಬೇಕೇ ಹೊರತು ಇದೇ ಮಾತು ತಗೊಂಡು, "ನೀನು-ನೀನು" ಎಂತ ಕಿತ್ತಾಡಿದರೆ ಏನು ಪ್ರಯೋಜನ? ಈ ವಿಷಯ ಬೆಳೆಸೋದರಿಂದ ಏನೂ ಲಾಭವಿಲ್ಲ. ನಿಮ್ಮೋರಿಗೆಲ್ಲ ಹೇಳಿ ಸರಿ ಮಾಡಿ ಬಿಡು. ಸಮಯ ಬಂದಾಗ ನಿಮ್ಮನ್ನೆಲ್ಲಾ ನೋಡಿಕೊಳ್ಳೋದು ನನ್ ಪಾಲಿಗೆ ಇದ್ದೇ ಇದೆ! ಅಲ್ಲವೇ?

**ಚನ್ನಯ್ಯ:** ಕ್ಷಮ್ಸಿ, ಸಾವ್‌ಕಾರ್ರೇ! ನಮ್ ಸಂಗದೋರ್ ಕೂಡ ಮಾತಾಡಿದೊರ್ತರ್ಲ ನಾನೇನೂ ಏಳ್‌ಲಾರೆ.

**ಸಂಪತ್:** ಸಂಘ!....ಈ ಹಾಳು ಸಂಘಗಳಿಂದಲೇ ನಿಮಗೆ ಮುಪ್ಪು! ನಿಮ್ಮದೆಲ್ಲಾ ಕುಳಿತ್ರ-ಕೊಂಬೆ-ಬುಡ ಕಡಿಯೋ ಮಾತುಗಳೇ!

**ಚನ್ನಯ್ಯ:** ಅದೇನೋ ಸಾವ್‌ಕಾರ್ರೆ! ಏನಾದ್ರೇನು? ನಮ್ಮಪ್ಪ, ನಮ್ ತಾತ ಇವ್ರೆಲ್ಲಾ ನಿಮ್ ಕೈಕೆಳ್ಗೇ ದುಡ್‌ದೋರು. ನಾನೂ ಇಲ್ಲೇ ದುಡೀತಿದೀನಿ. ಇಷ್ಟ್ ದಿನ ಆಯ್ತು. ಇಷ್ಟ್ ಜನಾ ದುಡ್‌ದಿದೇವೆ. ಆದ್ರೆ ಒಬ್ರೂ ಒಂದ್ ದಿನ್ನೂ ಆಯಾಗಿ ಒಟ್ಟೆ ತುಂಬ ಉಣ್‌ಲಿಲ್ಲ. ಅದೇನ್ ಕರ್ಮವೋ! ನಮ್ ಎಲ್ರ ಬಾಳೂ ಈಗೇ ಗೋಳು! ಇನ್ನು ನಮ್ ಮಕ್ಳು, ಮೊಂ-ಮಕ್ಳು ಈಗೇ ಅರೆವೊಟ್ಟೆ ತಿಂದ್‌ಕೊಂಡು ಇರ್‌ಬೇಕಾದ್ದೇನಾ! — ಅಂಬೋದೇ ನಮ್ ಗೋಳು!

**ಸಂಪತ್:** ನಮ್ಗತೀನೂ ಅಷ್ಟೇನಯ್ಯಾ. ನಾವು ಮಾತ್ರ ಬಂಗಾರ ತಿಂತಿದ್ದೇವೆ ಅಂತ ಅಂದುಕೊಂಡಿದ್ದೀರಾ ನೀವು?

**ಚನ್ನಯ್ಯ:** ಅಲ್ಲ ಸಾವ್ಕಾರ್ರೆ! ಬಂಗಾರಾ ಯಾರಾದ್ರೂ ತಿಂತಾರ್‍ಯೇ? ನಂ ಪರಾಣ ತಿಂತೀರಿ! ನಂ ರಗ್‌ತಾ ಈರ್‌ತೀರಿ! ನಮ್ ಮಾಂಸ ಮುಗಿಸ್‌ತೀರಿ!

**ಸಂಪತ್:** ಅಯ್ಯೋ ಹುಚ್ಚಾ! [ನಗುತ್ತಾ] ನಾವು ಹಾಗೆಲ್ಲಾ ಇರೋದರಿಂದಲೇ ಅಲ್ವೇ ನಿಮ್ಮನ್ನೆಲ್ಲಾ ನೋಡಿ "ಅಯ್ಯೋ ಪಾಪ!"

ಅನ್ನೋದು! ಇರಲಿ, ಅದೆಲ್ಲಾ ಈಗ್ಯಾಕೆ? ಇದು ತಗೋ [ಕೊಡ ಹೋಗುವನು]

**ಚನ್ನಯ್ಯ:** ಇದೇನ್ ಸಾವ್‌ಕಾರ‍್ರೆ? ಅಣ್‌ವೇ?

**ಸಂಪತ್:** ಹೌದಯ್ಯಾ. ನಿಮಿಗಲ್ದೆ ಮತ್ತೆ ಯಾರಿಗೆ ಕೊಡಲಿ? ತಗೋ ತಗೋ [ನೋಟುಗಳನ್ನು ಕೊಡಲು ಕೈ ಮುಂದೆ ಚಾಚುವನು]

**ಚನ್ನಯ್ಯ:** ಏನ್ ಸಾವ್‌ಕಾರ‍್ರೆ! ಲಂಚ ಕೊಡತೀರೇನು?! ನಮ್ಮ ಇನ್ನೂ ತುಳೀಲಾಕೆ? ಇನ್ನೂ ಎಚ್ಚಾಗಿ ನಾಯಿಗಳಂತೆ ಆಡಿಸಾಕೆ? ನಂ ಸಂಗಾನ ಒಡೆಯಾಕೆ! ಯಾಕೀ ಲಂಚ? ಬ್ಯಾಡಿ! ನಮ್ಗೆ ಬ್ಯಾಡಿ! ನಿಂ ದುಡ್ಡು ನಿಮ್ಮತ್ರೇ ಇರ್‌ಲಿ! [ಹೊರಟು ಹೋಗುತ್ತಾನೆ]

**ಸಂಪತ್:** [ಕುದಿದು] ಕುಡುಕ-ಬಡ್ಡೀಮಕ್ಳು! ಕೆಟ್ಟ ಜಾತಿ! [ಕವಿ ಪ್ರವೇಶಿಸುತ್ತಾನೆ]

**ಕವಿ:** ಏನಾಯಿತು? ಏನಾಯಿತು?

**ಸಂಪತ್:** ಆಗೋದೇನು?! ಅವನ ಕೈ ಮುರಿದುಹೋಯಿತು. ಜೋಡಿಸಬಹುದೂ-ಅಂತಾರೆ ಡಾಕ್‌ಟ್ರು. ಕಟ್ ಕಟ್ಸಿ ಮನೇಗೆ ಕಳಿಸಿದ್ದೇನೆ. ಎಷ್ಟು ಮಾಡಿದರೆ ತಾನೇ ಏನು?....ಸ್ವಲ್ಪವೂ ಕೃತಜ್ಞತೆ ಇಲ್ಲ ಬಡ್ಡೀ ಮಕ್ಳಿಗೆ! ಭಿಕಾರಿಗಳು! ಇವರಿಲ್ದೇ ಹೋದ್ರೆ ಲೋಕವೇ ಮುಳುಗಿ ಹೋಗುತ್ತೆ—ಎಂತು ತಿಳ್‌ದಿದಾರೆ.

**ಕವಿ:** ಮತ್ತೇನಾಯ್ತು ಈಗ ಹಾಗಾದರೆ?

**ಸಂಪತ್:** ಆ ವೀರಯ್ಯ....ಅವನ ಹೆಂಡತಿ ಮಕ್ಕಳು....ಅನ್ನವೋ ಅಂತ ಅಲೀತಾ ಇದ್ರು. ಅಂಥಾವೋರ್‍ನ ಆದರ್‌ಸಿ, ನಂ ಫ್ಯಾಕ್‌ಟ್ರೀಲಿ ಕೆಲ್ಸ ಕೊಡಿಸಿ, ಇಷ್ಟ್ರವರನ್ನಾಗಿ ನಾನು ಮಾಡಿದೆ! ಇವತ್ತು ಅವನಿಗೆ ಅಪಾಯವಾಯಿತು. ನನಗಿಲ್ದ ಅಭಿಮಾನ ಈ ಬಡ್ಡೀ ಮಗನಿಗೆ ಎಲ್ಲಿಂದ ಬಂತು ಅಂತೀನೆ! ಆ ಹರೀಂದ್ರ ಇದಾನಲ್ಲಾ—ಈ ಕೂಲಿಯೋರಿಗೆ ಇಲ್ಲದ್ದೆಲ್ಲಾ ಹೇಳಿಕೊಟ್ಟು ಹೆಚ್ಚಿಸ್ತಾ ಇದಾನೆ.

**ಕವಿ:** ಯಾರು ಆ ಹರೀಂದ್ರ? ಕೂಲಿಕಾರರ ಮುಖಂಡನೇ?

**ಸಂಪತ್:** ಹಾ ಹಾ! ಹೌದು, ಅವನೇ! ಕೆಲಸಕ್ಕೆ ಬಾರದ ಪ್ರತಿಯೊ

ಬ್ಬನೂ ಈ ಕಾಲದಲ್ಲಿ ಮುಖಂಡನೇ! "ಬಂಡವಾಳಗಾರ್‍ರು, ಸುಲಿಗೆ, ಜನಶಕ್ತಿ, ವಿಮೋಚನೆ"—ಅಂತ ನಾಲ್ಕು ಎಂಜಲು ಶಬ್ದಗಳು ಕಲಿತುಬಿಟ್ರೆ ಸಾಕು! ಮುಖ್ಯವಾಗಿ, ಈ ಮಕ್ಕಳಿಗೆ ಎಲ್ಲಿ ಹೋಗಿದೆ ಬುದ್ಧೀ ಅಂತೇನೆ! ಕೃತಜ್ಞತೆ ಇರಬೇಡವೇ? ಇವತ್ತು ನಾನು ಕಾರಖಾನೆ ಬೀಗ ಹಾಕಿದರೆ, ಆ ಹರೀಂದ್ರ ಹಾಕುತಾನೆಯೋ ಇವರಿಗೆ ಕೂಳು?

**ಕವಿ:** ಹಾಗೆಂದರೆ ಹೇಗಾದೀತು? ನೀವು ಕಟಾಕ್ಷವಿಡಬೇಕು!

**ಸಂಪತ್:** ಅದು ನನಗೆ ತಿಳಿಯದೇ? ಆ ವೀರಯ್ಯನ ದೊಡ್ಡ ಮಗನಿಗೆ, ಅವನ ಹೆಂಡತಿಗೆ, ಕಾರ್ಖಾನೇಲಿ ಕೆಲಸ ಕೊಡತೇನೆ ಎನ್ನಲಿಲ್ವೆ? ಅವನ ದೊಡ್ಡ ಮಗಳನ್ನ "ನಮ್ಮನೇಗೆ ಕೆಲಸಕ್ಕೆ ಕಳಿಸು" ಅಂತ ಹೇಳಲ್ವೆ? ಇದಕ್ಕಿಂತ ಹೆಚ್ಚಾಗಿ ಯಾರೇನು ಮಾಡ್ತಾರೆ? ಇಷ್ಟಾದರೂ ಮಾಡಬೇಕು ಅಂತ ನನಗೆ ಏನು ಅಗತ್ಯ?

**ಕವಿ:** ಮತ್ತೆ ಅವರಿಗೆ ಈಗ ಏನು ಬೇಕಂತೆ ಹಾಗಾದರೆ?

**ಸಂಪತ್:** ಬೇಕಾಗೋದಕ್ಕೆ ಏನು ಕಡಿಮೆ? ಕೋರೋದಕ್ಕೇನು? ನಾನೂ ಕೋರ್ತೇನೆ—ಬೆಟ್ಟದ ಮೇಲಿನ ಕೋತಿ ಬೇಕೂ ಅಂತ. ಸ್ವಲ್ಪವಾದರೂ ಮೇರೆ-ಮಿತಿ ಇರಬೇಡವೇ? ಇವರಿಗೆ ನಷ್ಟ ಪರಿಹಾರ ಕಟ್ಟಿಕೊಡಬೇಕಂತೆ! ಕುಡಿದು ಬಂದು ಇವರು ಮಾಡಿಕೊಂಡ ಪ್ರಮಾದಕ್ಕೆ ನಾನು ಪರಿಹಾರ ಕೊಡಬೇಕಂತೆ! ಏನೋ ಫ್ಯಾಕ್ಟರೀ ರೂಲ್ಸ್ ಅಂತೆ. ತಲೆ ಕಾಯಂತೆ. ಎಲ್‌ಲಾ-ಈ ಹರೀಂದ್ರ ಮಾಡ್ತಾ ಇದ್ದಾನೆ. ಮಾಡ್ಲಿ, ಮಾಡಲಿ! ಏನೇನು ಮಾಡ್ತಾನೋ ಮಾಡಲಿ! ನನ್ನ ಬೆದರಿಸ್ತಾರೆ! ಸುಂಯ್ ಸುಂಯ್ ಅಂತ ಅವರೇ ಸುಟ್ಟು ಬೂದಿ ಆಗತಾರೆ! ಆಗಲಿ! ಹಾಗೇ ಆಗಬೇಕು ಇವರಿಗೆ! [ಹೊರಟು ಹೋಗುತ್ತಾನೆ] [ಹರೀಂದ್ರ ಬರುತ್ತಾನೆ]

**ಹರೀಂದ್ರ:** ನಮಸ್ಕಾರ!

**ಕವಿ:** ನಮಸ್ಕಾರ!

**ಹರೀಂದ್ರ:** ಸಾಹುಕಾರರಿದ್ದಾರೆಯೋ?

**ಕವಿ:** ಒಳಗೆ ಇದ್ದಾರೆ. ನೀವು ಯಾರು?

**ಹರೀಂದ್ರ:** ಹರೀಂದ್ರ ಅಂತಾರೆ.

**ಕವಿ:** ಕೂಲಿಕಾರರ ನಾಯಕರೇ ?

**ಹರೀಂದ್ರ:** ನಾನು ಕೂಲಿಕಾರ ಸಂಘದ ಕಾರ್ಯದರ್ಶಿ. ತಾವು ?

**ಕವಿ:** ನಾನು....ಬನ್ನಿ ಕೂಡಿ....ರಘು ಅಂತ ನನ್ನ ಹೆಸರು.

**ಹರೀಂದ್ರ:** ಓಹೋ ! ನೀವೇನೋ ಕವಿಗಳು ?

**ಕವಿ:** ನಿಮಗೆ ಹೇಗೆ ತಿಳಿಯಿತು ?

**ಹರೀಂದ್ರ:** ಕೇಳಿದ್ದೆ.

**ಕವಿ:** ಯಾರು ಹೇಳಿದರು ?

**ಹರೀಂದ್ರ:** ಶೋಭಾ.

**ಕವಿ:** ಶೋಭಾ ?! [**ಸ್ವಲ್ಪ ಹೊತ್ತು ತಡೆದು**] ಸಾಹುಕಾರರ ಕೂಡ ಮಾತನಾಡಬೇಕೆ ?

**ಹರೀಂದ್ರ:** ಹೌದು. ನಿಮ್ಮ ಕೂಡಾನೂ !

**ಕವಿ:** ಆ ! ನನ್ನ ಕೂಡ !?

**ಹರೀಂದ್ರ:** ಹೌದು, ಹೌದು. ಕಾರಖಾನೆಯಲ್ಲಿ ನಡೆದ ಆಕಸ್ಮಿಕದ ವಿಷಯ ಕೇಳಿದಿರಾ ನೀವು ?

**ಕವಿ:** ತಿಳಿಯಿತು.

**ಹರೀಂದ್ರ:** ನಿಮ್ಮದೇನು ಅಭಿಪ್ರಾಯ ?

**ಕವಿ:** ಅದೆಲ್ಲ ನನಗೆ ತಿಳಿಯುವುದೇ ಇಲ್ಲ. ನನಗೆ ಅಭಿಪ್ರಾಯ ಗಳೇ ಇಲ್ಲ.

**ಹರೀಂದ್ರ:** ನಿಮ್ಮ ಅವಸ್ಥೆ ನಾನು ಬಲ್ಲೆ. ನಿಮ್ಮನ್ನ ನೋಡಿದರೆ ಸಾಕು. ತಿಳಿಯುತ್ತೆ !

**ಕವಿ:** ನೋಡಿದ ಮಾತ್ರಕ್ಕೇ—ಅದೇನು ಹಾಗಂದರೆ ?

**ಹರೀಂದ್ರ:** ನಿಮ್ಮ ಎಳೇ ನಿಂಜೇಕಾಯಿತನ ! ಅಲ್ಲ, ಅಲ್ಲ–ಅಜ್ಞಾನ ! ಯಾರಿಗಾದರೂ ತಿಳಿದು ಹೋಗುತ್ತೆ ನಿಮ್ಮ ಬಂಡವಾಳ !

**ಕವಿ:** ನೀವು ಸ್ವಲ್ಪ ಮರ್ಯಾದೆ ಕೊಟ್ಟು ಮಾತನಾಡೋದನ್ನು ಕಲಿತುಕೊಳ್ಳಬೇಕು !

**ಹರೀಂದ್ರ:** ಓ....ಹೋ ! ಕ್ಷಮಿಸಿ, ಕ್ಷಮಿಸಿ ನೀವು ಕವಿಗಳಲ್ಲವೇ !

ಕವಿ: ನಾನು ಕವಿ ಅಲ್ಲ.

ಹರೀಂದ್ರ: ಅಲ್ಲ ಅಂದರೂ ಕವಿಯೇ!

ಕವಿ: ಇದೇನು ಬಲವಂತ ? ನಾನು ಕವಿಯಲ್ಲ ಎಂದರೂ ನೀವು ಕೇಳುವ ಹಾಗೆಯೇ ಇಲ್ಲವಲ್ಲ. ನಾನು ಕವಿಯಾಗಿ ಬದುಕುವಂತಿಲ್ಲ, ಕವಿಯಾಗಿ ಯಾರೂ ಬದುಕಲಾರರು. ನಾನು ಅದನ್ನು ಚೆನ್ನಾಗಿ ಬಲ್ಲೆ! ಕವಿ ಎಂದುಕೊಂಡ ಕೆಲವು ದಿನಗಳಲ್ಲಿಯೇ ಸಾವಿನ ಸಮೀಪಕ್ಕೆ ಬಂದುದಾಯ್ತು! ಆಗಿನಿಂದ ಹಾಗೆಂದುಕೊಳ್ಳುವುದನ್ನೇ ಬಿಟ್ಟಿದ್ದೇನೆ. ಬದುಕಲು ಪ್ರಯತ್ನಿಸುತಿದ್ದೇನೆ.

ಹರೀಂದ್ರ: ಅದು ಹೋಗಲಿ. ನೀವು ಪುಸ್ತಕಗಳನ್ನು ಬರೀತೀರಾ?

ಕವಿ: ಬರೆದರೆ ?

ಹರೀಂದ್ರ: ಯಾರಿಗೋಸ್ಕರ ಬರೀತೀರಿ ?

ಕವಿ: ನನಗೋಸ್ಕರ—ಅಷ್ಟೇ!

ಹರೀಂದ್ರ: ಪ್ರಪಂಚದೊಡನೆ ನಿಮಗೆ ಯಾವ ಸಂಬಂಧವೂ ಇಲ್ಲವೆನ್ನುತ್ತೀರಾ ?

ಕವಿ: ಇಲ್ಲ ! ಇಲ್ಲ !! ಇಲ್ಲ !!!

ಹರೀಂದ್ರ: ಆದರೆ ಪ್ರಪಂಚಕ್ಕೆ ನಿಮ್ಮೊಡನೆ ಸಂಬಂಧವಿದೆ.

ಕವಿ: ಅದು ನನ್ನ ತಪ್ಪಲ್ಲ.

ಹರೀಂದ್ರ: ನೀವೇ ಹೀಗೆ ಮಾತನಾಡಿದರೆ ನಾನೇನು ಹೇಳಲಿ ? ಈ ನಾಲ್ಕು ಗೋಡೆಗಳ ನಡುವೆ, ಈ ಹಂಸ ತೂಲಿಕಾ ತಲ್ಪಗಳ ಮೇಲೆ ಹಾಯಾಗಿ ಕುಳಿತು, ಮದ್ಯಪಾನ, ಸುಂದರೀ-ಧ್ಯಾನಗಳಲ್ಲಿ ಲೋಲುಪರಾಗಿ, ಉಮರ್ ಖಯ್ಯಾಂ....

ಕವಿ: ಇಲ್ಲ, ಇಲ್ಲ ! ನಾನು ಅಂಥವನಲ್ಲ.

ಹರೀಂದ್ರ: ಕ್ಷಮಿಸಿ. ಪ್ರಪಂಚದೊಡನೆ ನಿಮಗೆ ಸಂಬಂಧವೇ ಇಲ್ಲವೆಂದುಕೊಂಡರೆ ತೀರಿ ಹೋಯಿತೆ ? ನಿಮ್ಮ ಸುತ್ತೂ ಇರುವ ಕತ್ತಲೆಯನ್ನು ಮತ್ತಷ್ಟು ದಟ್ಟವಾಗಿದೆ ಎಂದುಕೊಳ್ಳುತ್ತೀರಿ. ನಿಮ್ಮ ಕೈಗಳಿಗೆ ನೀವೇ ಸಂಕೋಲೆಗಳನ್ನು ಹಾಕಿಕೊಳ್ಳುತಿದ್ದೀರಿ. ಒಮ್ಮೆ ಬೆಳಕಿಗೆ ಬನ್ನಿ. ಆಗ ನಿಮಗೆ ಅರ್ಥವಾಗುತ್ತೆ.

ಕವಿ: ನೀವು ಕಾಂಗ್ರೆಸ್ಸಿನವರೆ ?

ಹರೀಂದ್ರ: ಅಲ್ಲ.

ಕವಿ: ಸೋಶಿಯಲಿಸ್ಟರೆ ?

ಹರೀಂದ್ರ: ಅಲ್ಲ.

ಕವಿ: ಕಮ್ಯೂನಿಸ್ಟರೆ ?

ಹರೀಂದ್ರ: ಅಲ್ಲ, ಅಲ್ಲ.

ಕವಿ: ಪ್ರಗತಿಶೀಲ ಲೇಖಕರ ಸಂಘದವರೆ ?

ಹರೀಂದ್ರ: ಅದೂ ಅಲ್ಲ.

ಕವಿ: ಹಾಗಾದರೆ ಹೇಳುವುದಕ್ಕೆ ಹಿಂಜರಿಯುತ್ತೀರಿ ನೀವು.

ಹರೀಂದ್ರ: ನಾನು ಯಾವುದಕ್ಕೂ ಸದಸ್ಯನಲ್ಲದಿದ್ದರೂ, ಒಬ್ಬ ಜನತಾ ಸೇವಕ. ಅದೇ ದೃಷ್ಟಿಯಿಂದಲೇ ಈಗ ನಿಮ್ಮೊಡನೆ ಮಾತನಾಡುತ್ತಿದ್ದೇನೆ.

ಕವಿ: ಜನತೆ ! ಸೇವೆ ! ನೀವು ಹೇಳುವುದೆಲ್ಲ ಅರ್ಥವಿಲ್ಲದ ಮಾತುಗಳು. ಬರಿಯ ಶಬ್ದಾಡಂಬರ !

ಹರೀಂದ್ರ: ಕವಿಗಳೇ ! ಅಜ್ಞಾನಿಗಳಾದ ಪ್ರಜೆಗಳಿಗೆ ಮಾರ್ಗದರ್ಶಕರಾಗಬೇಕಾದವರು ನೀವು. ದೇಶದ ಸಂಸ್ಕೃತಿ, ಸ್ವಾತಂತ್ರ್ಯ, ಸೌಭಾಗ್ಯ—ಇವೆಲ್ಲವೂ ನಿಮ್ಮ ಆಧಾರಕ್ಕೆ ಒಳಪಟ್ಟಿವೆ. ಜನತೆ ನಿಮ್ಮ ಲೇಖನಿ ಕೊರೆದ ಹಾದಿಯನ್ನು ಅನುಸರಿಸುತ್ತದೆ. ಮಾನವ ಜೀವಿತದಲ್ಲಿ ಕವಿಯು ಅಮರವಾಣಿಯ ವಾಹಕ. ಕವಿಯು ಚಿರಂಜೀವಿ. ಇಂದಿನ ವಿಜ್ಞಾನಕ್ಕೆ ನೀವೇ ಪ್ರೇರಕರು, ಸಾಧಕರು ! ನಿಮ್ಮಿಂದ ಸಾಮಾನ್ಯ ಜನರು ಬೆಳಕನ್ನು ಆಶಿಸ್ತಾರೆ.

ಕವಿ: ಆ ! ಆಶಿಸು....ತ್ತಾರೆ ! ಆನಂದಿ....ಸುತ್ತಾರೆ !! ಅಭಿನಂ....ದಿಸುತ್ತಾರೆ !!! ಕವಿಯ ಹೊಟ್ಟೆಯನ್ನು ಬತ್ತಿಸಿ, ಹೊತ್ತಿಸಿ, ಸಾಯಿಸುತ್ತಾರೆ !!!!

ಹರೀಂದ್ರ: ಹಾಗಲ್ಲ ಕವಿಗಳೆ ! ನೀವು ಒಣಮರದ ಆಸರೆಯಲ್ಲಿದ್ದೀರಿ. ಹಾವಿನ ಹೆಡೆಯ ನೆರಳಲ್ಲಿ ತಲೆಮರೆಸಿಕೊಂಡಿದ್ದೀರಿ. ನೀವೇ ನಿಮ್ಮ ವಿನಾಶ ತಂದುಕೊಳ್ಳುತ್ತಿದ್ದೀರಿ. ಈಗಲೂ ನೀವು ಜನತೆಗೆ

ಬೇಕಾದ್ದನ್ನು ಬರೆಯಿರಿ. ನಿಮ್ಮ ಸಾಹಿತ್ಯವನ್ನು ಜನತೆಯ ಅಭ್ಯುದಯಕ್ಕಾಗಿ ಉಪಯೋಗಿಸಿರಿ. ಪ್ರಪಂಚದ ಜೀವಶಕ್ತಿಯಾದ ಜನತೆಗೆ ಬೆಂಬಲವಾಗಿ ನಿಲ್ಲಿರಿ. ಆಗ ಜನಶಕ್ತಿಯೆಲ್ಲ ನಿಮ್ಮದೇ ! ಜನತೆಯೇ ನಿಮ್ಮನ್ನು ಪೋಷಿಸುತ್ತದೆ.

**ಕವಿ:** ಜನತೆ ! ದೇಶ ! ಸಂಘ !—ಇವೆಲ್ಲವೂ ದೊಡ್ಡ ದೊಡ್ಡ ವ್ಯರ್ಥ ಶಬ್ದಗಳು. ನಾನು ಬಲ್ಲೆ. ನನಗೆ ನೀವು ಹುಚ್ಚು ಹಿಡಿಸಬೇಡಿ.

**ಹರೀಂದ್ರ:** ಹಾಗಾದರೆ ನಿಮ್ಮಿಷ್ಟ. ವಾಸ್ತವತೆಗೆ ದೂರವಾಗಿ ಹೋಗಬೇಕೆಂದು ಇರುವವರೊಡನೆ ವಾದಿಸಿ ಫಲವಿಲ್ಲ. ಅಲ್ಲದೆ ಇದು ತಕ್ಕ ಸಮಯವೂ ಅಲ್ಲ. ಸಾಧ್ಯವಾದರೆ ಇನ್ನೊಮ್ಮೆ ನಿಮ್ಮನ್ನು ಕಾಣ್ತೇನೆ. ನಿಮ್ಮ ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳುವಿರಿ ಎಂಬ ಭರವಸೆ ನನಗಿದೆ. ಆದರೂ ಒಂದು ಮಾತು ! ನಿಮ್ಮ ಕವಿತಾ ಶಕ್ತಿಯ ದುರ್ವಿನಿಯೋಗ ಮಾತ್ರ ಮಾಡಬೇಡಿ. ನಿಮ್ಮಿಂದ ಜನತೆಗೆ ಹಾನಿಯಾಗದಿರಲಿ. ಈಗ ಸಧ್ಯ ನಿಮ್ಮಿಂದ ಅಷ್ಟು ಮಾತ್ರ ಸಾಕಾಗಿದೆ.

**ಕವಿ:** ಅಂದರೆ ?

**ಹರೀಂದ್ರ:** ಧನಿಕರ ತಾಂಡವ ನೃತ್ಯಕ್ಕೆ ತಾಳ ಹಾಕಲು ಕವಿತೆ ಬರೆಯಬೇಡಿ. ಈಗಷ್ಟೇ ಸಾಕು. ಇನ್ನೊಮ್ಮೆ ಯಾವಾಗಲಾದರೂ....
[ಸಂಪತ್ ಬರುತ್ತಾನೆ]

**ಹರೀಂದ್ರ:** [ಸಂಪತ್ ಕಡೆ ತಿರುಗಿ] ನಮಸ್ಕಾರ.

**ಸಂಪತ್:** ಏನು ಬಂದದ್ದು ?

**ಹರೀಂದ್ರ:** ನಿಮ್ಮೊಡನೆ ಮಾತನಾಡಬೇಕಂತಲೇ.

**ಸಂಪತ್** ಏನು ಮಾತಾಡೋದು ? ಮನಸ್ಸಿನಲ್ಲಿ ಏನೇನಿದೆಯೋ, ಹಾಗೆಯೇ ಮಾಡಿಕೊಳ್ಳಿ. ಸಂದರ್ಭ ಸಿಕ್ಕಿದೆ. ಉಪಯೋಗಿಸಿಕೊಳ್ಳಿ. [ಸಂಪತ್ ಹೊರಡುತ್ತಾನೆ. ಹರೀಂದ್ರ ಆತನನ್ನೇ ಹಿಂಬಾಲಿಸಿ ಹೋಗುತ್ತಾನೆ. ಕವಿ ತನ್ನ ತಲೆಯ ಮೇಲೆ ಕೈಯನ್ನಿಟ್ಟುಕೊಂಡು ಯೋಚನೆ ಮಾಡುತ್ತಾ ಕುಳಿತಿದ್ದಾನೆ. ಶೋಭಾ, ಕಾಫಿ ತಂದು ಮೇಜಿನ ಮೇಲೆ ಇಡುತ್ತಾಳೆ. ಕವಿ ತಲೆಯೆತ್ತಿ ನೋಡುತ್ತಾನೆ]

ಶೋಭಾ: ಕಾಫಿ ಕುಡಿಯಿರಿ, ತಣ್ಣಗಾಗಿ ಹೋಗುತ್ತೆ.

ಕವಿ: ನನಗೆ ಬೇಡ, ಶೋಭಾ !

ಶೋಭಾ: ಬೇಡ ಎಂದರೆ ಹೇಗೆ ? ಕಾಫಿ ಬೀಳದಿದ್ದರೆ ಕವಿತೆ ಹೊರ ಟೀತೇ ? ಅಂದ ಹಾಗೆ ನೋಡಿ. ನನ್ನ ಕ್ಲಾಸ್‌ಮೇಟ್ ಒಬ್ಬ ಇದ್ದ ಕಾಲೇಜಿನಲ್ಲಿ. ಅವನಿಗೆ ಒಂದು ಕಪ್ ಕಾಫಿ, ಒಂದು ಪ್ಯಾಕ್ ಸಿಗರೇಟು—ಇಷ್ಟಿದ್ದರೆ ಸಾಕು ! ಎಂತಹ ಉದ್ದುದ್ದ ಕವಿ ತೆಯಾದರೂ ಬರೆದು ಬಿಸಾಡ್ತಿದ್ದ. ಅಲ್ಲ ! ನಿಮ್ಮನ್ನ ಒಂದು ಮಾತು ಕೇಳ್ತೀನಿ ! ಈ ಕಾಫಿಗೂ, ಆ ಕವಿತೆಗೂ ಅದೇನು ಬಾದರಾಯಣ ಸಂಬಂಧ ? ಹೇಳ್ತೀರಾ ?

ಕವಿ: ಶೋಭಾ ! ಪ್ಲೀಸ್ ! [ದೈನ್ಯದಿಂದ ನೋಡುವನು]

ಶೋಭಾ: ಹೊರಡಲೇ ಹಾಗಾದರೆ ? ನಿಮಗೆ ಅಷ್ಟೊಂದು ಕಷ್ಟವಾದರೆ ನಾನೇಕೆ ಇರಲಿ ? ಇಗೋ ಹೊರಟೆ. ಆ ಕಾಫಿ ಕುಡಿದ್ಬಿಡಿ.

ಕವಿ: ನನಗೆ ಕಾಫಿ ಬೇಡ.

ಶೋಭಾ: [ಕುತೂಹಲಕ್ಕಾಗಿ] ತಲೆ ನೋಯ್ತಿದೆಯೋ ?!

ಕವಿ: ಹೌದು, ತಲೆ ಚಿಟ್ಟಸಿ ಹೋಗ್ತಿದೆ. ದಯವಿಟ್ಟು ಈ ದಿನ ನನ್ನನ್ನು ತೊಂದರೆಪಡಿಸಬೇಡ. ನಾನು ಒಂಟಿಯಾಗಿ ಇರಲು ಅವ ಕಾಶ ಕೊಡು.

ಶೋಭಾ: [ತಲೆ ಮುಟ್ಟಿ ನೋಡಿ ಗಾಬರಿಯಿಂದ] ಅಬ್ಬಬ್ಬ ! ತಲೆ ನಿಜವಾ ಗಿಯೂ ಸುಡುತ್ತಿದೆಯಲ್ಲಾ ! ಈ ಕಾಫಿ ಕುಡಿಯಿರಿ ಮೊದಲು. [ಕವಿಯು ಕಾಫಿಯನ್ನು ಕುಡಿಯುವನು] ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ಅಂದ ಹಾಗೇ—ಕಾರ್ಖಾನೇಲಿ ಪ್ರಮಾದ ನಡೆದದ್ದು ನಿಮಗೆ ತಿಳೀತೆ ?

ಕವಿ: ಹೌದು. ರಂಗನ ತಂದೆಗೆ, ಪಾಪ, ಅಪಘಾತವಾಯಿತಂತೆ.

ಶೋಭಾ: ನಿಮಗೂ ಈಗಾಗಲೇ ತಿಳೀತೇ ?

ಕವಿ: ತಿಳೀತು.

ಶೋಭಾ: ಪಾಪ ! ರಂಗನು ಅಳುತ್ತಿದ್ದರೆ ನನಗೆ ನೋಡೋಕಾಗೋ ದಿಲ್ಲ.

ಕವಿ: ಆತನಿಗೆ ಈಗ ಹೇಗಿದೆಯಂತೆ ?

ಶೋಭಾ: ಪ್ರಾಣಭಯವೇನೂ ಇಲ್ಲವಂತೆ. ಆದರೂ ಇನ್ನು ಆತ ಬದುಕಿದ್ದು ಪ್ರಯೋಜನವೇನು ? ಆ ಬಡ ಸಂಸಾರಕ್ಕೆ ಮತ್ತಷ್ಟು ಭಾರ ! ತಾನೊಬ್ಬ ಗಳಿಸಿ ಮನೆಯವರಿಗೆಲ್ಲ ಅರೆ ಹೊಟ್ಟೆ ಅಂಬಲಿ ದೊರಕಿಸ್ತಿದ್ದ. ಇನ್ನು ಮುಂದೆ ಆ ಸಂಸಾರದ ಗತಿ ಏನಾಗ ಬೇಕು ?

ಕವಿ: ಏನಾಗಬೇಕು ?

ಶೋಭಾ: ಏನಾಗಬೇಕು ?! ನಡು ಬೀದಿಯಲ್ಲಿ ತಿರಿದು ತಿನ್ನಬೇಕು ! ಅಷ್ಟಲ್ಲದೆ ಮತ್ತೇನಿದೆ ? ಕಾಯ ಕಷ್ಟ ಪಡುವವರ ಗತಿ ಮತ್ತೇನಾದೀತು ? ದೇಹದಾರ್ಢ್ಯ ಇರುವವರೆಗೆ—ಬೆವರು ಸುರಿಸಿ, ಮೈ ಮುರಿದು, ಕಷ್ಟಪಟ್ಟರೆ ಅರೆ ಹೊಟ್ಟೆ ಗಂಜಿ–ನೀರು ಪ್ರಾಪ್ತಿ ! ಇಲ್ಲವಾದರೆ ಅದೂ ಇಲ್ಲ ! ಇನ್ನು ಆ ಮುರುಕು ಸಂಸಾರದ ಗತಿ ಏನಾಗಬೇಕು ? ನೀವು ಕವಿಗಳು ! ಒಂದು ಸಾರಿಯಾದರೂ ಇಂಥ ಗೋಳನ್ನು ಊಹಿಸಿಕೊಂಡೀರಾ ? ಬರೆದೀರಾ ?

ಕವಿ: **ನೀನು** ಅವರನ್ನು ಕಂಡು ದುಃಖಿಸ್ತೀಯಾ ?

ಶೋಭಾ: ಅದೇನು ಹಾಗೆಂದರೆ ? ನಾನು ಮನುಷ್ಯಳಲ್ಲವೆ ? ನನಗೆ ಹೃದಯವಿಲ್ಲ—ಎಂದುಕೊಂಡಿದ್ದೀರಾ ?

ಕವಿ: ಆದರೆ ನಿಮ್ಮ ಅಣ್ಣಯ್ಯ !?

ಶೋಭಾ: ಏನೆಂದಿರಿ ?

ಕವಿ: ಏನೆಂದೆ ?! ನನಗೇ ಬುದ್ಧಿ ಭ್ರಮಣೆಯಾಗ್ತಿದೆ—ಆಗಿದೆ ! ನಾನೇನು ಮಾತನಾಡ್ತಿದ್ದೇನೋ ನನಗೇ ತಿಳೀದು. ಈ ಹೊತ್ತು ಒಂದು ಗಂಟೆಯಿಂದ ನನಗೆ ಏನೋ ಬಾಧೆ !—ನನಗೇ ತಿಳೀವ ಬಾಧೆ !

ಶೋಭಾ: [ಸ್ವಲ್ಪ ತಡೆದು] ಗಾಳಿ ತಣ್ಣಗೆ ಬೀಸ್ತಿದೆ. ತಿರುಗಾಡಿಕೊಂಡು ಬರೋಣ. ಬರ್ತೀರಾ ?

ಕವಿ: ಕಾರಿನಲ್ಲಿಯೋ ?

ಶೋಭಾ: ನಡೆದುಕೊಂಡೇ ಹೋಗಿ ಬರೋಣ.

ಕವಿ: ನಾನು ಬರೋದಿಲ್ಲ.

ಶೋಭಾ: ಕಾರಿನಲ್ಲಿಯೇ ಹೋಗೋಣ.

ಕವಿ: ಊಹುಂ ! ನಾನು ಬರೋದಿಲ್ಲ.

ಶೋಭಾ: ಹೌದು ನೀವ್ಯಾಕೆ ಬರ್ತೀರಿ ಎಂದೂ ಅಭ್ಯಾಸವಿಲ್ಲದ್ದು !

ಕವಿ: ಹೌದು, ನಾನು ಕೂಪ ಮಂಡೂಕವೇ !

ಶೋಭಾ: ಆಮೇಲೆ ?

ಕವಿ: ಕತ್ತಲೆಯಲ್ಲಿ ಕುಳಿತ ಪ್ರಪಂಚ ಜ್ಞಾನ ತಿಳಿಯದ ಅವಿವೇಕಿ !

ಶೋಭಾ: ನಾನೆಂದೆನೆ ?

ಕವಿ: ನೀನೆನ್ನಬೇಕೆ ! ಬೇರೆಯವರ ಕೈಲಿ ಎನ್ನಿಸುತ್ತಿ !

ಶೋಭಾ: ಯಾರ ಕೈಲಿ ?

ಕವಿ: ಯಾರ ಕೈಲಿ !?. ನಿನಗೆ ತಿಳೀದೇನೋ ಪಾಪ ! ಹರೀಂದ್ರನೊಡನೆ ನನ್ನ ವಿಷಯ ನೀನು ಏನೂ ಹೇಳಲಿಲ್ಲವೋ ?

ಶೋಭಾ: ಏನು ಹೇಳಿದ್ದೀನಿ ?

ಕವಿ: ನಾನು ಅಜ್ಞಾನಿಯೆಂದು ; ಪ್ರಪಂಚಜ್ಞಾನ ಇಲ್ಲದವದವನೆಂದು !

ಶೋಭಾ: ಹೇಳಿದೆ.

ಕವಿ: ನಿನ್ನನ್ನು ಯಾರು ಹೇಳೆಂದರು ? ನೀನು ಹೇಗೆ ಹೇಳಿದೆ ಆತನಿಗೆ ?

ಶೋಭಾ: ಓಹೋ ! ಅದಕ್ಕೆ ನಿಮ್ಮ ಆಜ್ಞೆ-ಅನುಜ್ಞೆ ಬೇಕೇನು ?! ನಿಮ್ಮ ಅಂಕೆಗೆ ಒಳಪಟ್ಟಿರಲಿಕ್ಕೆ ನಾನೇನೂ ನಿಮ್ಮ ಹೆಂಡತಿ ಅಲ್ಲವಲ್ಲ !

ಕವಿ: ಹೌದು. ನೀನು ಈ ಮನೆಯ ಯಜಮಾನಿತಿ. ಹಣವಂತರ ಮಗಳು. ನಾನು ನಿಮ್ಮ ಮನೇಲಿ ಕೂಳಿಗೆ ಉಳಿದಿರುವ ಒಬ್ಬ ದುರ್ಭಾಗ್ಯ. ನೀನು ನನ್ನನ್ನು ಕಾಪಾಡುತ್ತಿದ್ದೀ. ಆದ್ದರಿಂದ ನಿನಗೆ ಯಾರ ಸಂಗಡಲಾದರೂ, ನನ್ನ ವಿಷಯವಾಗಿ ಏನು ಬೇಕಾದರೂ ಹೇಳಲು ಅಧಿಕಾರ ಉಂಟು ! ಅಷ್ಟೇ ಅಲ್ಲವೆ ?

[ಈ ಮಾತುಗಳನ್ನು ಕೇಳಿ ಶೋಭಾ ದುಃಖಿಸುತ್ತಾಳೆ. ಕೋಪವೂ ಹೆಚ್ಚುತ್ತದೆ. ಕಣ್ಣೀರು ಬರುತ್ತದೆ. ಏನೂ ಹೇಳಲಾರದೆ ಕಡೆಗೆ ನಿಷ್ಠುರವಾಗಿ "ಹೌದು" ಎಂದಿಷ್ಟು ಮಾತ್ರವೇ ಹೇಳುತ್ತಾಳೆ.]

**ಕವಿ:** ಹೌದು! ನಾನೆಂದರೆ ನಿನಗ್ಯಾಕೆ ಲಕ್ಷ್ಯವಿರಬೇಕು? ನಾನೊಬ್ಬ ಭಿಕಾರಿ! ನೀನು ಲಕ್ಷಾಧಿಕಾರಿಣಿ! ನಾನು ನಿನ್ನ ಕಾಲಡಿಯ ಹುಳುವಿನ ಸಮಾನ! ಆದ್ದರಿಂದಲೇ ಊಳಿಗದ ರಂಗನ ಮುಂದೆ ಸಹ ನನ್ನನ್ನು ಟೀಕಿಸಿದ್ದಿ!

**ಶೋಭಾ:** ನಾನೇ?

**ಕವಿ:** ಹೌದು ನೀನೇ! ನೀನಲ್ಲದೆ ಮತ್ತಾರು? ನನ್ನ ಹಾಡುಗಳು ಹಾಡುಗಳಲ್ಲ; ಕವಿತೆಯು ಕವಿತೆಯಲ್ಲ! ಬರಹವೆಲ್ಲ ಬರಿಯ ಕಾಲ ಕೆಲಸ!

[ತನ್ನ ಉಕ್ಕೇರಿ ಬಂದ ದುಃಖವನ್ನು ತಡೆಯಲಾರದೆ ಶೋಭಾ ಸೋಫಾದ ಮೇಲೆ ಧೊಪ್ಪನೆ ಕುಳಿತುಕೊಳ್ಳುವಳು.]

**ಕವಿ:** [ಸ್ವಲ್ಪ ನಿಧಾನಿಸಿ] ನನಗೆ ಬುದ್ಧಿಯಿಲ್ಲ! ನನ್ನ ಮಾತೇ ನನಗೆ ತಿಳೀದಾಗಿದೆ. ನಾನು ಹೀಗೆ ಮಾತನಾಡಿ ಎರಡು ವರ್ಷಗಳಾದುವು. ಈಗಲೇ ಹೀಗೆಲ್ಲಾ ಮಾತನಾಡ್ತಿರೋದು!........ [ಶೋಭಾ ಕಡೆ ನೋಡಿ] ಶೋಭಾ! ಯಾಕೆ ಅಳುತ್ತಿ?

**ಶೋಭಾ:** [ಸರಕ್ಕನೆ ಎದ್ದು] ಎಂದಿಗೂ ಅಳೋದಿಲ್ಲ. ನಾನು ಧನಿಕರ ಮನೆಯ ಹುಡುಗಿ! ಈ ಮನೆಯ ಯಜಮಾನಿತಿ! ನೀವು ನಮ್ಮ ಮನೆಯಲ್ಲಿ ಬಿದ್ದಿರುವ ಒಬ್ಬ ನಿರ್ಭಾಗ್ಯ ದುರ್ಭಾಗ್ಯಜೀವಿ! ಅನ್ನಿ, ಅನ್ನಿ! ಮನಸ್ಸಿಗೆ ಬಂದಂತೆಲ್ಲಾ ಅನ್ನಿ! ಸ್ವಲ್ಪ ಕಾಲದ ಮೇಲಾದರೂ ನಿಮಗೆ ಶೋಭಾ ಯೋಗ್ಯತೆ ತಿಳೀದೆ ಹೋಗುವುದಿಲ್ಲ. [ಶೋಭಾ ಹೊರಟು ಹೋಗುತ್ತಾಳೆ.]

[ತೆರೆಯ ಹಿಂದೆ]

**ಸಂಪತ್:** ಲೋ! ಇಲ್ನೋಡು. ನಾ ಹೇಳೋ ಮಾತು ಕೇಳು. ಇಂಥಾವೋರು ಲಕ್ಷ ಮಂದಿ. ಮಹಾ ಮಹಾ 'ಎಂಏ' 'ಬೀಏ'ಗಳೇ ನಮ್ಮ ಮನೆ ಬಾಗಿಲಿನಲ್ಲಿ ಕಾವಲು ಕಾಯ್ತಿದ್ದಾರೆ! ನೀನೆಷ್ಟು? ನಿನ್ನ

ಕೂಲಿಕಾರರೆಷ್ಟು? ನಿನ್ನನ್ನೂ ಅವರನ್ನೂ ನಾನು ಒಂದೇ ನಿಮಿಷದಲ್ಲಿ ನಾಶ ಮಾಡಬಲ್ಲೆ, ಗೊತ್ತೆ? ಹಕ್ಕುಗಳಂತೆ ಹಕ್ಕುಗಳು! ಯಾರಪ್ಪನ ಮನೆ ಗಂಟು? ನಿಮ್ಮ ತಾತ ಸಂಪಾದಿಸಿಟ್ಟಿದ್ದಾನೆಯೇ?!

**ಹರೀಂದ್ರ:** ಮಾತು ಜೋರು ಮಾಡಬೇಡಿ, ಸಾವ್ಕಾರ್ರೇ!

**ಸಂಪತ್:** Get out. First of all you get out.
[ಗೆಟ್ ಔಟ್. ಫಸ್ಟ್ ಆಫ್ ಆಲ್ ಯೂ ಗೆಟ್ ಔಟ್.]

[ಈ ಸಂಭಾಷಣೆ ಕೇಳಿ ಕವಿಗೆ ಮತ್ತೆ ಬುದ್ಧಿ ಭ್ರಮಣೆಯಾಗಿದೆ ಆ ಕಡೆ ಹೋಗುತ್ತಿದ್ದ ಶೋಭಾ ಈ ಕೂಗು ಕೇಳಿ ನಿಲ್ಲುತ್ತಾಳೆ.]

**ಶೋಭಾ:** [ಮೆಲ್ಲನೆ ಕವಿಯನ್ನು ಸಮೀಪಿಸುತ್ತ] ಏನು ಈ ಕೂಗು? ಯಾರ ಮೇಲೆ?

**ಕವಿ:** ಹರೀಂದ್ರನ ಮೇಲೆ.

**ಶೋಭಾ:** ಯಾಕೆ?

**ಕವಿ:** ರಾಯಭಾರ ತಂದದ್ದಕ್ಕಾಗಿ! ವೀರಯ್ಯನಿಗೆ ಕಾನೂನು ಪ್ರಕಾರ ನಷ್ಟಪರಿಹಾರ ಕೊಡಬೇಕಂತೆ—ಜೀವನಾಂಶ! ಫ್ಯಾಕ್ಟರೀ ರೂಲ್ಸ್ ಪ್ರಕಾರ ಕೊಡಬೇಕಾದ್ದನ್ನು ಕೇಳಲು ಬಂದಿದ್ದ ಹರೀಂದ್ರ. ಈಗ 'ಗೆಟ್‌ಔಟ್' ಎನ್ನಿಸಿಕೊಂಡು ಹೋಗ್ತಿದ್ದಾನೆ.

**ಸಂಪತ್:** [ಪ್ರವೇಶಿಸುತ್ತ] Damn these beggars! Nothing doing! [ಡ್ಯಾಮ ದೀಸ್ ಬೆಗರ್ಸ್! ನಥಿಂಗ್ ಡುಯಿಂಗ್]—ಏನೂ ಕೊಡೋದಿಲ್ಲ! ಏನ್ ಮಾಡ್ತಾರೋ ಮಾಡ್ಲಿ.

**ಕವಿ:** ರಾಯಭಾರ ಏನಾಯ್ತು?

**ಸಂಪತ್:** ರಾಯಭಾರವೂ ಇಲ್ಲ, ಏನೂ ಇಲ್ಲ. ಈ ಬಡ್ಡೀ ಮಕ್ಕಳಿಗೆ ತಿಂದು ಮದ ಹತ್ತಿದೆ. ನಾಲ್ಕು ದಿನ ಒಣಗಿಸಿದ ಹೊರತು ದಾರಿಗೆ ಬಾರದು. ರಘೂ! ಪ್ರೆಸ್‌ಗೆ ಒಂದು ಸ್ಟೇಟ್‌ಮೆಂಟ್ ಬರೆದಿಡಿ.

**ಕವಿ:** ಏನೆಂದು?

**ಶೋಭಾ:** ಅಣ್ಣಯ್ಯಾ! ಇನ್ನೊಂದು ಸಲ ಚೆನ್ನಾಗಿ ಆಲೋಚಿಸು.

**ಸಂಪತ್:** ಆಲೋಚನೆಯೂ ಇಲ್ಲ, ಏನೂ ಇಲ್ಲ. ನಾನು ಚೆನ್ನಾಗಿಯೇ ಆಲೋಚ್ಸಿದ್ದೇನೆ. ಇನ್ನು ನಾವು ಮಾಡಬೇಕಾದ್ದು ಏನೂ ಇಲ್ಲ.

**ಶೋಭಾ:** ಏನೂ ಇಲ್ಲವೇ ?

**ಸಂಪತ್:** ಏನೂ ... ಇಲ್ಲ. ಇಲ್ಲವೆಂದು ಅವರಿಗೆ ಹೇಳಿದ್ದೂ ಆಯಿತು.

**ಶೋಭಾ:** ಹಾಗಾದರೆ ಅವರು ಮಾಡತಕ್ಕದ್ದು ಬಹಳವಿದೆ.

**ಸಂಪತ್:** ಮಾಡಲಿ ! ಏನು ಮಾಡ್ತಾರೋ ಮಾಡಲಿ ! ಏನೇನು ಸಾಧಿಸ್ತಾರೋ ಸಾಧಿಸಲಿ ! ನನ್ನ ಬೆದರಿಸ್ತಾರೇನು ?

**ಶೋಭಾ:** ಅಣ್ಣಯ್ಯ ! ಅವರು ಅಂದುಕೊಂಡದ್ದೆಲ್ಲಾ ಸಾಧಿಸಬಲ್ಲರು. ಅವರೆಲ್ಲರೂ ಒಂದಾದರೆ ನಾವು ಮಾಡತಕ್ಕದ್ದು ಏನೂ ಇಲ್ಲ. ನಮ್ಮ ಜೀವನಕ್ಕೆ ಅವರ ಶ್ರಮವೇ ಆಧಾರ. ನಾವು ಕೆಲಸಮಾಡು ವವರಲ್ಲ. ಕುಳಿತು ತಿನ್ನುವವರು ಅಷ್ಟೆ.

**ಸಂಪತ್:** ಶೋಭಾ ! ಮುಚ್ಚು ಬಾಯಿ !

**ಶೋಭಾ:** ಅಣ್ಣಯ್ಯಾ ! ನನ್ನ ಮಾತು ಕೇಳು. ಬಡಬಗ್ಗರ ಮೇಲೆ ಕನಿಕರವಿಡದಿದ್ದರೆ ಹ್ಯಾಗೆ ? ನಾವು ಒಂದು ಸಲ ಒಬ್ಬ ಕಮಿಷನರಿಗೋ, ಸಚಿವರಿಗೋ, ಕೊಡುವ ಟೀ ಪಾರ್ಟಿಗೆ ಬೇಕಾಗುವಷ್ಟು ಹಣ ಕೂಡ ನಮ್ಮನ್ನು ಅವರು ಈಗ ಕೇಳುತ್ತಿಲ್ಲ. ಅವರು ಏನು ಮಾಡಿಯಾರು ಪಾಪ ! ಆ ಸಂಸಾರದ ಭಾರವೆಲ್ಲ ಅವನೊಬ್ಬನ ಮೇಲೆ ಇತ್ತು. ಅವನೂ ಅವನ ಮಕ್ಕಳೂ ತಮ್ಮ ಶಕ್ತಿಯನ್ನೆಲ್ಲಾ ಧಾರೆ ಎರೆದಿಲ್ಲವೆ ? ನಿನಗೆ ಎಷ್ಟು ಲಾಭ ಸಂಪಾದಿಸಿ ಕೊಟ್ಟಿದ್ದಾರೆ ! ನಿನ್ನದೇನಿದ್ದರೂ ನಿರ್ಜೀವಿಯಾದ ಹಣ ಮಾತ್ರವೇ ! ಅವರು ಜೀವ ಶಕ್ತಿ ! ಪ್ರಾಣ-ರಕ್ತವನ್ನು ಧಾರೆ ಎರೆದಿದ್ದಾರೆ. ಆತ ನಿನ್ನ ಸೇವೆ ಮಾಡಿ ಮಾಡಿ ಸೋತು ಸುಣ್ಣವಾದ. ಈಗ ಬಿದ್ದಿದ್ದಾನೆ. ಇನ್ನು ಅವನ ಗತಿ ಏನಾಗಬೇಕು ?

**ಸಂಪತ್:** ಆಗುವುದೇನು ? ಅವನು ಸತ್ತರೆ ಏನಾಗೋದು ?

**ಶೋಭಾ:** ನಾನೂ ನೀನೂ ಸತ್ತರೆ ?

Shut up ! [ಷಟಪ್ —ಎನ್ನುತ್ತ ಕೈ ಮೇಲುತ್ತುವನು; ಸುಮ್ಮನಾಗು ವನು.]

**ಶೋಭಾ:** ಹೊಡಿ, ಹೊಡಿ ! ಯಾಕೆ ಸುಮ್ಮನಾದೆ ?

[ಸಂಪತ್ ತನ್ನ ಕೋಪವನ್ನೆಲ್ಲಾ ಮೇಜಿನ ಮೇಲೆ ತೋರಿಸುತ್ತ ಗುದ್ದುವನು]

**ಸಂಪತ್:** [ಕವಿಯನ್ನು ಕುರಿತು] ಸ್ಟೇಟ್‌ಮೆಂಟ್ ಬೇಗ ಬರೆದಿಡಿ. ಈ ಬಡ್ಡೀ ಮಕ್ಕಳು ಏನು ಮಾಡ್ತಾರೋ ನೋಡಿಯೇ ಬಿಡ್ತೇನೆ. ಬರೀರಿ—"ಕಾರಖಾನೆಯ ಮೆಶಿನ್‌ಗಳಲ್ಲಿ ಯಾವ ದೋಷವೂ ಇಲ್ಲ. ತನಿಖೆ ಮಾಡಿದ್ದೇವೆ. ಅವನು ಕುಡಿದು ಬಂದು ಮೈಮೇಲೆ ಪ್ರಜ್ಞೆ ಇಲ್ಲದೆ ಆಕ್ಸಿಡೆಂಟ್ ಮಾಡಿಕೊಂಡ. ಪರಿಹಾರ ಕೊಡಬೇಕಾದ ಜವಾಬುದಾರಿ ಕಾರಖಾನೆಯ ಯಜಮಾನನಿಗೆ ಎಷ್ಟು ಮಾತ್ರವೂ ಇಲ್ಲ. ಹರೀಂದ್ರ ತನ್ನ ಸಂಘವನ್ನು ಬಲಪಡಿಸಿಕೊಳ್ಳುವುದಕ್ಕೋಸ್ಕರ ಈ ಸಂದರ್ಭವನ್ನು ದುರುಪಯೋಗ ಮಾಡಿಕೊಳ್ಳುತ್ತಿದಾನೆ. ಇತ್ಯಾದಿ, ಇತ್ಯಾದಿ." ನಮಗೂ-ಅವರಿಗೂ ನಡೆದಿರುವ ರಾಯಭಾರದ ವಿಷಯ ಕೂಡಾ ಬರೆದಿಡಿ. ಪೇಪರಿಗೆ ಕಳಿಸ್ಬೇಕು.

**ಶೋಭಾ:** ಚೆನ್ನಾಗಿ ಯೋಚನೆ ಮಾಡಿಯೇ ಬರೀರಿ. ಏನೂ ತೊಂದರೆಯಿಲ್ಲ.

**ಸಂಪತ್:** ಶೋಭಾ ನೀನು ಹೊರಡು ! ತಲೆ ಹರಟೆ ಮಾಡ್ಬೇಡ ! [ಕವಿಯನ್ನು ಕುರಿತು] ಯಾವಾಗ ಬರೆದು ಕೊಡುತ್ತೀರಪ್ಪಾ, ರಘು ?

**ಕವಿ:** ನನಗೇನೋ ಈ ಹೊತ್ತು ಸರಿಯಾಗಿಲ್ಲ. ಆದಷ್ಟು ಬೇಗನೆ ಬರಕೊಡ್ತೇನೆ.

**ಸಂಪತ್:** ಟಪ್ಪಾಲು ಹೊತ್ತಿಗೆ ಮುಗಿಸುವ ಪ್ರಯತ್ನ ಮಾಡಿ [ಸಂಪತ್ ಹೋಗುತ್ತಾನೆ]

**ಶೋಭಾ:** [ಕವಿಯನ್ನು ಕುರಿತು] ಏನು ? ಬರೆಯುತ್ತೀರಾ ?

**ಕವಿ:** ಯಾವುದು ?

**ಶೋಭಾ:** ಸ್ಟೇಟ್‌ಮೆಂಟ್.

**ಕವಿ:** ಏನೆಂದು ?

**ಶೋಭಾ:** ತಪ್ಪೆಲ್ಲಾ ಬಡವರದೇ ಎಂದು !

**ಕವಿ:** ಅದೇನೋ ನಾನೇನೂ ಕೇಳಲಿಲ್ಲ-ಅಲ್ಲ! ನನಗೆ ಯಾವುದೂ ಕೇಳಿಸಲಿಲ್ಲ!

**ಶೋಭಾ:** ಕೇಳಿಸಲಿಲ್ಲವೇ ನಿಮಗೆ ?

**ಕವಿ:** ಇಲ್ಲ. ನೀನು ಸುಮ್ಮನೆ ಇರು, ಶೋಭಾ ! ಇಗೋ ಬಂದೆ. [ಕವಿಯು ಹೊರಡುತ್ತಾನೆ]

**ದಾಸಪ್ಪ:** [ಪ್ರವೇಶಿಸುತ್ತಾ] ಸರಸ್ವತೀ ನಮಸ್ತುಭ್ಯಂ ವರದೇ ಕಾಮರೂಪಿಣಿ | ಕಾವ್ಯಾರಂಭಂ ಕರಿಷ್ಯಾಮಿ ಸಿದ್ಧಿರ್ಭವತು ಮೇ ಸದಾ||

**ಶೋಭಾ:** ಅದೇನಪ್ಪ ? ಮಂತ್ರ ಹೇಳ್ತಾ ಇದ್ದೀ !

**ದಾಸಪ್ಪ:** ಕೂತುಕೋ ತಾಯಿ ! ಕುಳಿತುಕೋ ! ನಿನಗೆ ಕತೆ ಹೇಳಿ ಬಹಳ ದಿನಗಳಾದುವು. ಮಗುವಾಗಿದ್ದಾಗ "ತಾತಾ ! ತಾತಾ ! ಕತೆ ಹೇಳೂ" ಅಂತ ಪೀಡಿಸ್ತಾ ಇದ್ದೆ. ಈಗೇನೋ ದೊಡ್ಡವಳು ! ಅಲ್ಲವೇ ?

**ಶೋಭಾ:** ಇಲ್ಲಪ್ಪ ! ನನಗೇನೂ ತಿಳೀದು. ಅದಿರಲಿ. ಎಲ್ಲಿ, ಒಂದೇ ಒಂದು ಕತೆ ಹೇಳು ಕೇಳೋಣ.

**ದಾಸಪ್ಪ:** ಹೇಳ್ತೇನೆ ತಾಯಿ. ಕತೆಗಳಿಗೇನು ಕಮ್ಮಿ ! ಬೇಕಾದಷ್ಟಿವೆ. ನಿನ್ನೆ ರಾತ್ರಿ ನನಗೊಂದು ಕನಸು. ಸರಸ್ವತಿ ಪ್ರತ್ಯಕ್ಷವಾಗಿದ್ದಳು. "ಕುಮಾರಾ ! ಒಂದು ಕಾವ್ಯ ಬರೆದು ನನ್ನ ಪಾದಗಳಿಗೆ ಅರ್ಪಿಸಬಾರದೆ ?" ಎಂದಳು. ನಾನು—"ಅಮ್ಮಾ, ನನಗೇನೂ ತಿಳೀದು. ಮೂಢನು. ನಾನೇನು ಕಾವ್ಯ ಬರೆದೇನು ?" ಎಂದೆನು. ಅದಕ್ಕೆ ಆಕೆ—"ಅಯ್ಯ ಭಕ್ತನೇ ! ಭಯಪಡಬೇಡ. ಈ ಕಾಲದಲ್ಲಿ ನಿನ್ನಂಥವರೆಲ್ಲರೂ ಕಾವ್ಯ ಕರ್ತೃಗಳಾಗುತ್ತಿದಾರೆ. ಕವಿಯಾಗಬೇಕಾದರೆ ಒಂದೇ ಒಂದು ರಹಸ್ಯವಿದೆ. ಅದನ್ನು ನಾನು ನಿನಗೆ ಹೇಳಿಕೊಡುತ್ತೇನೆ. ಕೇಳು"ಎಂದು ನನಗೊಂದು ರಹಸ್ಯ ಹೇಳಿಕೊಟ್ಟಳು. ತಕ್ಷಣವೇ ನಾನೊಬ್ಬ ಕವಿಯಾಗಿಬಿಟ್ಟೆ. ನನಗೂ ಈಗ ಕವಿತಾ ಸ್ಫೂರ್ತಿ ಬಂದೇ ಬರುತ್ತೆ. ಬರೆಯಬಲ್ಲೆ. ಕೇಳು:

ಬಣ್ಣವ ತಿದ್ದಿ ಕಂಪಿನ ಪರಾಗವ ಚೆಲ್ಲಿ ಮಕರಂದ ಬಿಂದುಗಳ್
ಪೊಂಗುಗಳೋರೆ ಮಾಡಿ ನಸುಬುಗ್ಗೆಯ ದಳವಮಾಡಿ ಕಂಪುಗಳ್
ಉಡಿಯ ತುಂಬಿ ಶಿಲ್ಪ ಕಲೆಗಟ್ಟಿದ ಪೂಗಳ ಬಾಲೆಯರ್
ಕುಗ್ಗಿ ಕೃಶಿಸಿ ಧೂಳ್ವಿಡಿದು ಕೂಗಲ್ ಸಹಿಸಲೆಂತೆಂಬೇ !

ಶೋಭಾ: ಅಲ್ಲಪ್ಪಾ ! ಇದೇನು ನೀನೇ ಬರೆದದ್ದೇನು—ಈ ಕವಿತೆ? ಇದನ್ನೆಲ್ಲೋ ನಾನು ಓದಿದ ಹಾಗೆ ಜ್ಞಾಪಕವಿದೆಯಲ್ಲಾ!

ದಾಸಪ್ಪ: ಅಯ್ಯೋ ಹುಚ್ಚಮ್ಮ! ಅದೇನು ನಾನು ಬರೆದದ್ದೇ ಆಗ ಬೇಕೆ? ಇನ್ನೊಬ್ಬರ ಪುಸ್ತಕದಿಂದ ಹಾರಿಸಿ 'ತನ್ನದು' ಎಂದು ಹೇಳ ಬಾರದೇ ? ಮತ್ತೊಬ್ಬರ ಇಡೀ ಪುಸ್ತಕವನ್ನೇ 'ಹಾರಿಸಿ' ತನ್ನ ಹೆಸ ರಿನಲ್ಲಿ ಅಚ್ಚು ಹಾಕಿಸಿ ಕವಿ ಎನಿಸಿಕೊಳ್ಳುವವರೂ ಇದ್ದಾರೆ. ಅವ ರಲ್ಲಿ ನಾನೂ ಒಬ್ಬ. ನಾನೂ ಕವಿಯೇ !

ಶೋಭಾ: ಏನಪ್ಪಾ ? ಅಂತಹ ನೀಚರೂ ಇದ್ದಾರೆಯೇ ?

ದಾಸಪ್ಪ: ಅಯ್ಯೋ ಹುಚ್ಚಮ್ಮ! ನಿನಗೇನೂ ತಿಳೀದು. ಪೂರಾ ನಿಮ್ಮ ತಾಯಿಯವರ ಹೋಲಿಕೆಯೇ! ಮನೇಲಿ ಏನೇನು ನಡೀತಿದೆ ಅಂಬೋದು ಕೂಡ ತಿಳಿದುಕೊಳ್ಳಲಾರದ ಹುಚ್ಚಿ ನೀನು ! ಆ ಕವಿಯೂ ಸಹ ಹಾಗೆಯೇ! ತನ್ನ ಪುಸ್ತಕಗಳು ಏನಾಗಿವೆಯೆಂದು ನೋಡಿಕೊಳ್ಳುವ ಅಗತ್ಯವೇ ಇಲ್ಲ ಆತನಿಗೆ! ಅದಕ್ಕೇ ಅವು ಹೆಸರು ಬದಲಾಗಿ ಅಚ್ಚಾಗಿವೆ.

ಶೋಭಾ: ಆದೇನಪ್ಪ ನೀನು ಹೇಳೋದು ? ನನಗೇನೂ ತಿಳಿಯೋದೇ ಇಲ್ಲ.

ದಾಸಪ್ಪ: ಇಲ್ಲಿ ನೋಡು ತಾಯಿ. ನಾನು ಮುಚ್ಚು ಮರೆಯಿಡುವವ ನಲ್ಲ. ಇದ್ದದ್ದನ್ನು ಇದ್ದ ಹಾಗೆಯೇ ಹೇಳುವವನು. ಹೇಳಿಕೊಂ ಡದ್ದನ್ನು ಹಾಗೆಯೇ ಕೇಳುವ ಸ್ವಭಾವ ನನ್ನದು. ಇನ್ನು ಅಂದು ಕೊಳ್ಳೋದೇನು ? ಸಂಪತ್ ಹೀಗೆ ಮಾಡಬಹುದೂಂತ ನಾನು ಭಾವಿಸಿರಲಿಲ್ಲ. ಕವಿಯ ಪುಸ್ತಕಗಳನ್ನು ತನ್ನ ಹೆಸರಿನಲ್ಲಿ ಆಚ್ಚು ಹಾಕಿಸಬಹುದೂಂತ ನನಗೇನು ಕನಸು ಬಿದ್ದಿತ್ತೆ ?!

ಶೋಭಾ: ಇದೇನಪ್ಪ ? ಅಣ್ಣಯ್ಯನನ್ನು ವೃಥಾ ಹೀಗೆ ದೂರುತ್ತಿ ನೀನು! ಏನೋ ಲೇಖನಗಳು, ಉಪನ್ಯಾಸಗಳು ಇವೆಲ್ಲಾ ಬರೆಸಿ ಕೊಳ್ಳುತ್ತಾನೆ. ಇಂಥಾ ನೀಚ ಕೆಲಸ ಮಾಡಿಯಾನಂತೀಯಾ ? ಚೆನ್ನಾಗಿದೆಯಪ್ಪಾ! ಒಳ್ಳೇ ಮಾತು ಹೇಳ್ತೀಯಲ್ಲ?

ದಾಸಪ್ಪ: ಸರಿಯಮ್ಮ ಹಾಗಾದರೆ! ನಿನಗ್ಯಾಕೆ ಸಿಟ್ಟು ?. ನನ್ನ ಮಾತು

ಸತ್ಯವೆಂದು ಅದಕ್ಕೆ ರುಜುವಾತು ಕೊಡಬಲ್ಲೆ. ಆದರೆ ಇಷ್ಟು ದಿನಕ್ಕೆ ನೀನು ಈ ಮುದುಕನ ಮಾತು ನಂಬಲಾರದೆ ಹೋದೆಯಲ್ಲಾ! ಒಳ್ಳೇದು ! ಇರಲಿ ! [ದಾಸಪ್ಪ ಹೋಗುತ್ತಾನೆ]

[ಶೋಭಾ ಹಾಗೂ ಹೀಗೂ ಓಡಾಡುತ್ತಿದ್ದಾಳೆ; ರಂಗ ಬರುತ್ತಾನೆ.]

**ಶೋಭಾ:** ರಂಗಾ, ಏನಪ್ಪ ಬಂದೆ ?

**ರಂಗ:** ನಿಮ್ಮ ಹತ್ತಿರ್ ವೇ ಕೆಲ್ಸವಿತ್ರಮ್ಮ .

**ಶೋಭಾ:** ಅಪ್ಪನಿಗೆ ಹೇಗಿದೆ ?

**ರಂಗ:** ಹಾಗೆಯೇ ಇದೇರಮ್ಮ.

**ಶೋಭಾ:** ಈಗ ಎಲ್ಲಿಂದ ಬಂದೆ ನೀನು ?

**ರಂಗ:** ಮನೆಯಿಂದಲೇರಮ್ಮ .

**ಶೋಭಾ:** ಕವಿಯವರು ಬರಲಿಲ್ಲವೇ ಅಲ್ಲಿಗೆ ?

**ರಂಗ:** ಇಲ್ರಮ್ಮ .

**ಶೋಭಾ:** ಹಾದೀಲಿ ಕಾಣಿಸಲಿಲ್ಲವೇ ?

**ರಂಗ:** ಕಾಣಿಸಲಿಲ್ಲಲ್ಲಾ!

**ಶೋಭಾ:** ಹರೀಂದ್ರರೂ ಬರಲಿಲ್ಲವೇ ?

**ರಂಗ:** ಬರಲಿಲ್ರಮ್ಮ.

**ಶೋಭಾ:** ಈಗೇನಪ್ಪಾ ಬಂದೆ ? ಅಪ್ಪನ್ಯಾಕೆ ಬಿಟ್ ಬಂದೆ ?

**ರಂಗ:** ನಿಮ್ಕೂಡ ಹೇಳಿ ಸಂಬ್ಳ ತಗೊಂಡ್ ಹೋಗೋಣಾಂತ ಬಂದೆ.... ಸಾವ್ ಕಾರ್ರು ಇಲ್ವೆ ಮನೇಲಿ ?

**ಶೋಭಾ:** [ತನ್ನ ಕೈ ಚೀಲದಿಂದ ಹಣ ತೆಗೆದುಕೊಂಡು] ಇಲ್ಲ.... ರಂಗಾ ! ಇಗೋ !

**ರಂಗ:** ಹತ್ತೇನೆ ? ಇನ್ನೂ ಎರಡು ಕೊಡಬೇಕ್ರಮ್ಮ.

**ಶೋಭಾ:** ಇದು ಸಂಬಳ ಅಲ್ಲಪ್ಪ. ಇಟ್ಕೊಕೋ ನೀನೇ !.... ಹಾಗಾದರೆ ಕೆಲಸ ಬಿಟ್ ಬಿಡ್ತೀಯಾ ?

**ರಂಗ:** ಬಿಟ್ಬಿಡಬೇಕ್ರಮ್ಮ. ಅಪ್ನ ಹತ್ರ ಒಬ್ರಿರ್ಬೇಡವೆ ?

**ಶೋಭಾ:** ಹೌದು. ನೀನು ಹೋಗು ; ಮನೆ ಕಡೆ ಭದ್ರ. ಅಪ್ಪನನ್ನು

ಚೆನ್ನಾಗಿ ನೋಡಿಕೋ. ರಂಗಾ ! ಏನಾದರೂ ಹಣ ಬೇಕಾದರೆ ನನ್ನ ಬಂದು ನೋಡು. ಸಂಕೋಚ ಪಡಬೇಡ ತಿಳೀತೆ ?

**ರಂಗ:** ಹಾಗೇ ಆಗ್ಲಿ ತಾಯಿಾ.

**ಶೋಭಾ:** ಸರಿ. ಹೋಗಿನ್ನು ನಿಮ್ಮ ತಂದೆ ನಿನ್ನ ಹಾದಿ ನೋಡ್ತಾ ಇರಬಹುದು. ಪಾಪ।

**ರಂಗ:** ಬರ್ತೇನ್ರಮ್ಮ. [**ಹೇಳಿದರೂ ಹೊರಡಲಾರದೆ ಅಳುತ್ತಾ ನಿಲ್ಲುತ್ತಾನೆ. ಶೋಭಾ ಅವನ ಹತ್ತಿರ ಬರುತ್ತಾಳೆ.**]

**ಶೋಭಾ:** ರಂಗಾ ಸುಮ್ಮನಿರು. ಅಳಬೇಡ. ಯಾಕಪ್ಪ ಅಳೋದು ? ನಾನು ಆಗಾಗ ಬಂದು ನೋಡಿಕೊಂಡು ಬರ್ತೇನೆ. ಈಗ ನೀನು ಹೋಗು.

[ರಂಗ **ಹೋಗಲಾರದೆ ಹೋಗುತ್ತಾನೆ.**]

## ದೃಶ್ಯ ೩

[ವೀರಯ್ಯನ ಹುಲ್ಲು ಮನೆ. ಒಂದು ಚಾಪೆಯ, ಅಥವಾ ಮುರುಕು ಮಂಚದ, ಮೇಲೆ ವೀರಯ್ಯನು ಮಲಗಿದ್ದಾನೆ. ಬಲಗೈಗೆ ಪಟ್ಟಿ ಸುತ್ತಿದೆ. ಕೊರಳಿಗೆ ಒಂದು ಸಣ್ಣ ಚೌಕ ತೂಗುಹಾಕಿ ಅದರಲ್ಲಿ ಆ ಕೈಯನ್ನಿಡಲಾಗಿದೆ. ಚನ್ನಯ್ಯ ಬಳಿಯಲ್ಲಿಯೇ ಹೀಗೂ ಹಾಗೂ ತಿರುಗಾಡುತ್ತಿದ್ದಾನೆ. ಪಕ್ಕದಲ್ಲಿ ರಂಗನು ನಿಂತಿದ್ದಾನೆ. ಒಂದು ಕ್ಷಣ ನಿಶ್ಯಬ್ದ. ಸುಮ್ಮನಿದ್ದ ರಂಗನು ಒಮ್ಮೆಲೇ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸುತ್ತಾನೆ.]

**ಚನ್ನಯ್ಯ:** ಯಾಕೋ? ಏನಾಯ್ತೋ ಅಳೋಕೆ?

**ರಂಗ:** ನೀನು ಆ ಮಿಷಿನ್ ಹತ್ರ ಯಾಕಪ್ಪಾ ಹೋದ್ದು? [ಅಳುತ್ತಲೇ ಕೇಳುತ್ತಾನೆ]

**ಚನ್ನಯ್ಯ:** ಹುಂ! ಬೇಕೆಂತ್ಲೇ ಕೈಯಿಟ್ಟ ಕಣೋ! ಮಿಷನ್ನಲ್ಲಿ ಕೈ ಕತ್ತರ್ಸಿ ಹೋಗ್ಲೀಂತ! ಇದೆಲ್ಲಾ ನಮ್ ಸಾವ್‌ಕಾರ್ರ ದಯಾ ಕಣೋ! ಯಾವಾಗಲೂ ಹೆಣಚಾಕ್ರಿ ಮಾಡಿಕ್ಕೊಂಡು ಲಾಭ ಲೆಕ್ಕ ಮಾಡೋದೇ ಅವ್ರ ಕೆಲ್ಸ! ಮಿಷನ್ ರಿಪೇರಿ-ಗಿಪೇರಿ ಅವರಿಗೆಲ್ಲಿ ಬೇಕಾಗಿದೆ? ನಂಗೆ ಮೊದ್ಲೇ ಗೊತ್ತಿತ್ತು—ಇಂಥಾ ಆಕ್ಸಿಡೆಂಟ್ ಆಗ್‌ಬಹುದ್ದಂತ!

**ವೀರಯ್ಯ:** ಹರೀಂದ್ರರು ಎಲ್ಲಿದ್ದಾರಪ್ಪ?

**ಚನ್ನಯ್ಯ:** ಸಾವ್ಕಾರ್ರತ್ರ ಮಾತಾಡೋಕೋಗಿದಾರೆ. ಇವರ್ಗೊಂದ್ಹುಚ್ಚು! ನಂ ಗೋಳು ಈ ಸಾವ್ಕಾರ್ರು ಕೇಳ್ತಾರಾ? ಒಂದ್ ಮಾತೂ ಕೇಳೋಲ್ಲ. ನಂಗೇನೋ ನಂಬ್ಕೆಯಿಲ್ಲ!

**ವೀರಯ್ಯ:** ಇವತ್ಗೆ, ಮನೇಲಿ ಗಂಜೀಗೆ ಒಂದು ನುಚ್ಚಿನ್ ತುಣ್ಕೂ ಇಲ್ಲಪ್ಪಾ!

**ಚನ್ನಯ್ಯ:** ಇಲ್ದಿದ್ರೇನಾಯ್ತು? ಆ ಸಾವ್ಕಾರ್ನ ಎಷರ್ನಲ್ಲಿ ಎಲ್ರೂ ಒಟ್ಟಾಗ್ಸಾಯೋಣ! ಅವ್‌ನಿಗೆ ಸಂತೋಷಾಗ್ತೇತೆ. ಎಲ್ರ ಮನೇಲೂ

ಅಷ್ಟೆ, ಎಲ್ರ ಮನೇ ದೋಸೇನೂ ತೂತೇ! ಇವತ್ತೇ ಸಂಬ್ಳದ್ ದಿನ. ಒಬ್ನತ್ರವೂ ಒಂದ್ ಬಿಡಿಕಾಸಿಲ್ಲ.

ವೀರಯ್ಯ: ಓಗಿ ನನ್ ಸಂಬ್ಳ ತಗೊಂಡ್ ಬಾಪ್ಪಾ. ಬಂದಷ್ಟ್ ಬರ್ಲಿ.

ಚನ್ನಯ್ಯ: ಆಯ್ತು! ಚೆನ್ನಾಗೇಳ್ದಿ! ಇದಿಂಗೋ ಅಂಗೋ ತಿಳ್ಕೊಳ್ಳೋಗ್ ಬೇಕು. ಅರ್ದ್‌ವಗರ್ಗೂ ಸಂಬಳ್ವೂ ಬೇಡ, ಸಾರಿಗ್ಯೂ ಬ್ಯಾಡ.

ವೀರಯ್ಯ: ಸಾವ್‌ಕಾರ್ ಕೂಡ ನಮಗ್ಯಾಕಪ್ಪ ಜಗ್ಳ? ಅವ್‌ರು ಏನು ಮಾಡಿದ್ರೂ ನಡೀತೇತೆ! ನಾವಿಂಗೇ ಬೆಂದೋಗೋದೇ! ನನ್ನಿಂದ ನಿಮ್ಗೆಲ್ಲಾ ಯಾಕ್ರಪ್ಪ ತೊಂದ್ರೆ! ಅಲ್ಲ, ಚೆನ್ನಯ್ಯಾ! ನನ್ ಮಾತ್ ಕೇಳಿ. ನೀವೆಲ್ರೂ ಓಗಿ ಆ ದುಡ್ ತಗೊಂಬಂದು ಮಕ್ಕಿಗಷ್ಟು ಅಂಬ್ಲಿ ಮಾಡ್ಹಾಕ್‌ಬಾರ್ದೆ? ನನ್ನೆಸರ್ನಲ್ಲಿ ಮಕ್ಳೂ, ಮರಿಗ್ಳೂ, ಯಾಕಪ್ಪಾ ಒದ್ದಾಡ್‌ಬೇಕು?

ಚನ್ನಯ್ಯ: ನೀ ಸುಮ್ನೆ ಇರ್ರ್ಮಾವಾ! ನಿಂಗ್ ಸ್ವತ ತಿಳ್ಯೋದಿಲ್ಲ. ಏಳಿದ್ಮಾತೂ ಕೇಳೋದಿಲ್ಲ. ಹರೀಂದ್ರರಿಗೆ ತಿಳೀದೆ? ಅವ್ರು ಎಲ್ಲಾ ನೋಡ್ಕೋತಾರೆ. ಅವರೆಂಗ್ ಏಳಿದ್ರಂಗ್ ಮಾಡೋಣ....ರೂಲ್ಸ್ ಪರ್ಕಾರ ಕೊಡ್ ಬೇಕಾದ್ದನ್ನೇ ತಪ್ಪಿಸ್‌ಬೇಕೂಂತ ನೋಡ್ತಿದ್ದಾನೆ ಆ ಸಾವ್‌ಕಾರ!

ರಂಗ: ಅಪ್ಪಾ! ಇಗೋ ಹತ್ರೂಪಾಯಿ!

ಚನ್ನಯ್ಯ: ನಿನ್ ಸಂಬಳ್‌ವೇನೋ?

ರಂಗ: ಅಲ್ಲಾಪ್ಪಾ!

ಚನ್ನಯ್ಯ: ಮತ್ತೆ?

ರಂಗ: ಸೋಬಮ್ನೋರು ಬಾಳೊಳ್ಳೋರು. [ಹೀಗೆನ್ನುವ ವೇಳೆ ಶೋಭಾ ಪ್ರವೇಶಿಸುತ್ತಾಳೆ. ಈ ಮಾತು ಕೇಳಿ ಸರಕ್ಕನೆ ಹೊರಗೆ ಹೋಗುವಳು, ಯಾರಿಗೂ ತಿಳಿಯದಂತೆ.]

ಚನ್ನಯ್ಯ: ಆಹಹ! ಅದೆಲ್ಲಾ ಸುಳ್ಳೋ! ಕುಲ್ಡಿನಲ್ಲಿ ಮೆಳ್ಳೆ! ಆ ಅಣ್ಣನ್ ತಂಗಿ! ಅಲ್ವೋ, ಸಾವ್ಕಾರ್ರಲ್ಲೂ ಒಳ್ಳೇರು ಇದ್ದಾರೇಂತ ನಂಬ್ತೀಯಾ?

ರಂಗ: ಇಲ್ಲಾ ಮಾವಾ! ನಿಂಗ್ ತಿಳೀದು. ಸೋಬಮ್ಮ ಎಷ್ಟೋ

ನಮ್ಮಲ್ಲೇ ಇದ್ದಾರಲ್ಲಾ ಕೆಲವರು! ಅದಕ್ಕೇ ನಮ್ ಗತಿ ಹೀಗಿದೆ.

**ಚನ್ನಯ್ಯ:** ಅಯ್ಯೋ! ಏನು ಸಾಧಿಸ್ತಾರೆ ಬಿಡಿ!....ಅದಿರ್ಲಿ, ಓದ್ಕೆಲ್ಸಾ ಏನಾಯ್ತು?

**ಹರೀಂದ್ರ:** ಏನೂ ಆಗಿಲ್ಲ.

**ಚನ್ನಯ್ಯ:** ಎಂಗಾದೀತೇಳಿ! ನಂಗೊತ್ತು; ನಾನಾಗ್ಲೇ ಏಳ್ದೆ. ಬಡವ್ರೊಟ್ಟೆಗೆ ಇಂಗ್ಹೊಡದ್ರೆ ತಾನೇ ಸಾವ್-ಕಾರ್ರಿಗೆ ದುಡ್ಸೇರೋದು! ಅವ್ರ್ಯಾಕೊಪ್ಕೋತಾರೆ? ಏನೂ ಆಗಲ್ವಂತೆ! ನಾನೇಳಿದ್ರೆ ಕೇಳಿದ್ರೋ!

**ವೀರಯ್ಯ:** ಅವ್ರು ಕೇಳ್ದೆ ಓದ್ರೆ ನಾವೇನ್ಮಾಡೋಕಾಗುತ್ತಪ್ಪಾ! ಎಲ್ಲಾ ಅವರ್ದಯ!

**ಚನ್ನಯ್ಯ:** ಕೇಳೋಲ್ಲ! ಅದ್ಯಾಕ್ಕೇಳ್ತಾರೆ? ನಾವಿಂಗೇ ಇರೋಷ್ಟ್ ದಿನ ಕೇಳೋಲ್ಲ. ದಯ್ವೂ ಇಲ್ಲ ಗಿಯ್ವೂ ಇಲ್ಲ. ಮುಕ್ಯಾ ನಮ್ಗೆ? ಅವ್ರ ದಯ್ವೇ ಬೇಕಾಗಿಲ್ಲ.

**ವೀರಯ್ಯ:** ಬೇಡಾಂದ್ರೆ ಹ್ಯಾಗೋಪ್ಪ! ನಾವಿಲ್ದಿದ್ರೆ ಅವ್ರಿಗೆ ಎಂಗಾದ್ರೂ ನಡೀತ್ತೆ ಆದ್ರೆ–

**ಚನ್ನಯ್ಯ:** ಆಂ! ನಡೀತ್ತೆ! ನಡೀದೇ ಏನು?! ಅಂಗದ್ ಕೊಂಡೇ ನಾವು ಇಂಗಾಗಿರೋದು! ಅಲ್ಲಾ! ಕಷ್ಟ ಪಡೋರು ನಾವು. ನಾವಿಲ್ದಿದ್ರೆ ಈ ಕಾರುಗ್ಳಲ್ತಿಗ್ರೋರೆಲ್ಲಾ ಏನಾದಾರು?! ಒಂದಿನಾದ್ರು ಅವ್ರು ಮೈ ಬಗ್ಸಿ ಕೆಲ್ಸ ಮಾಡ್ಯಾರೇ? ನಡೀತ್ತಂತೆ, ಉಚ್-ಮೋರೇ ಇಟ್ಕೊಂಡು ಮಾತಾಡೋಕೋದ್ರೆ ಆದೀತೆ! ನಮ್ಗತಿ ಎಂದ್ರೂ ಇಷ್ಟೇ!!

**ವೀರಯ್ಯ:** ನೀನ್ ಸುಮ್ನಿರು ಚನ್ನಯ್ಯಾ! ನಿಂಗ್ ತಿಳೀದು. ಒಳ್ಳೇದೂ ಕೆಟ್ಟದ್ದೂ ತಿಳಿದೇ ಮಾತಾಡ್‌ಬೇಡ.

**ಚನ್ನಯ್ಯ:** ಸುಮ್ನಿರ್ಲಾ!? ಯಾಕ್ಮಾವಾ ಸುಮ್ನಿರೋದು? ಒಟ್ಟೆ ಉರ್ದೋಗ್ತಾ ಇದೆ. ಎಷ್ಟ್ ದಿನಾ ಇಂಗೇ ಬಿದ್ ಸಾಯ್ತಿರೋದು? ಬದ್ಕಿರೋಷ್ಟ್ ದಿನಾ ಚಾಕ್ರಿ ಈ ಆಳ್ಹೊಟ್ಟೇಗಿರೊದೇನೇ!

ಒಂದ್ ಸಲಾನ್‌ದ್ರೂ ಆತ ನಮ್‌ಗೆ ಒಳ್ಳೇದ್ಮಾಡಿದ್ದಾನ್ಯೆ? ಅದಿಲ್‌ದಿದ್ರೆ ಓಗ್ಲಿ. ಒಳ್ಳೇ ಮಾತಾದ್ರೂ ಆಡಿದ್ದಾನ್ಯೆ? ಬೆಲೆಗಳೆಲ್ಲಾ ಬೆಟ್‌ದಂಗೆ ಬೆಳೀತಿರೋವಾಗ, ನಾವ್ ಸಾಯ್ತಾ ಇದ್ರೆ, ಒಂದ್ ಬಿಡ್ಕಾಸಾದ್ರೂ ಎಚ್ಕೊಲಿ ಕೊಟ್‌ನೇ? ಇಗೋ-ಅಗೋ ಅಂತ ಇಷ್ಟ್ ದಿನಾ ತಳ್‌ದ. ಈಗ 'ಯುದ್‌ವಾಗೋಯ್ತು' ಅಂತಾನೆ! ನಮ್ಗೆ ಬರೀ ಗಂಜೀನೂ ಸಿಕ್ಕೋದಿಲ್ಲ; ಸಾಯ್ತಾ ಇದ್ದೇವೆ. ಈ ಸಾವ್‌ಕಾರ ನೂರಾರು ಚೀಲ ಕಾಳು ಮುಚ್ಚಿಟ್‌ಕೊಂಡು, ಕಳ್ ಸಂತೇಲಿ ಮಾರ್ಕೊಳ್ತಾನೆ! ನಮ್ಗೆ ಒಂದ್ ಕಾಳಾದ್ರೂ ಕೊಟ್ನೆ? ಅರ್ರೊಟ್ಟೇನಾದ್ರೂ ತಿನ್‌ದೂ-ತಿನ್‌ದೇ, ಎಂಡ್‌ತೀ-ಮಕ್‌ಳೂ ಇದೆಲ್ಲಾ ಸೈಸ್ಕೊಂಡು ದುಡೀತಾ ಇದ್ರೆ ಇವತ್ತೇನ್ ಮಾಡಿದ್ದಾನ್ ನೋಡು? ನಿಂಗ್ತೀಳೀದ್ ಮಾವಾ. ಇನ್‌ಸರೋಗೋದಿಲ್ಲ.

**ವೀರಯ್ಯ:** ಸರೋಗ್ದೆ ಏನ್ ಮಾಡುತ್ತಪ್ಪಾ! ಅಯ್ಯೋ ಹುಚ್ಚಾ! ನಮ್ ಕೈಲೇನಾಗುತ್ತೆ?

**ಚನ್ನಯ್ಯ:** ನಾವೇನ್ ಉಪ್‌ವಾಸಾ ಸಾಯ್ತೇವೇಂತೀಯಾ? ಕೈಕಾಲ್ ಗಟ್ಯಾಗಿದ್ರೆ ಒಪ್ಪೊತ್-ಅರ್ರೊಟ್ಟೆ ಎಂಗಾದ್ರೂ ಸಿಕ್ತೇತೆ. ನಿನ್ ಕೈ ಮುರಿದೋಯ್ತು; ರಗ್‌ತಾ ಅರ್‌ದೋಯ್ತು; ಬಿದ್ದಿದ್ದಿ-ಅಂತ ಆ ಸಾವ್ಕಾರನ್ಗೆ ಗೋಳೀಳ್ಕೊಂಡ್ರೆ "ತಪ್ಯಾದ್ರು?" ಅಂತ ದಬಾಯ್ಸ್ತಾನೇ ಒರ್ತು "ಅಯ್ಯೋ ಪಾಪಾ" ಅಂತ ಬಾಯ್ಮಾತ್ಗಾದ್ರೂ ಅಂದ್ನೆ? ಇಲ್ಲಿ ಜೀವಾ ಜಗ್‌ತಿದ್ರೆ, ತಪ್ ಯಾರ್ದಂತೆ, ತಪ್ಪು!!

**ಕವಿ:** ತಪ್ಪು ನಿಮ್ಮದೇನಂತೆ!

**ಚನ್ನಯ್ಯ:** ಯಾರು ಏಳಿದ್ದು?

**ಕವಿ:** ಆತನೇ! ನೀವು ಕುಡಿದು ಬಂದು ಅಪಾಯ ಮಾಡಿಕೊಂಡಿರಂತೆ!

**ಚನ್ನಯ್ಯ:** ಅಂಗಂದ್ನೆ?

**ವೀರಯ್ಯ:** ಅಯ್ಯೊ! ಈ ನಮ್ ಕುಟ್ಕು ಜೀವ್ನಕ್ಕೆ ಅದೂ ಒಂದೆ?

**ಚನ್ನಯ್ಯ:** ಅಂದ್‌ನಂತೆ! ಎಲ್ಲಿ? ನನ್ ಮುಂದೇ ಅನ್ಲಿ! ಹೇಳ್‌ತೇನೆ, ಕುಡ್‌ದಿದ್‌ವಂತೆ! ಕುಡ್‌ದೋನೂ, ಕುಡ್‌ಯೋನೂ ಅವ್‌ನೇ

  

ಅಲ್ವೆ? ನಾನ್ ನೋಡಲ್ವೇ ಆ ಬ್ರಾಂದಿ ಬಾಟ್ಲೀಗಳ್ನ? ನಮ್ದೇ ತಪ್ಪಂತೆ! ಆ ಆಕ್ಸಲ್ ಸವ್ದೋಗಿದೇಂತ ನಾನು ಎಷ್ಟ್ ದಿನ್ದಿಂದ ಏಳ್ತಿದ್ನೋ, ಕೇಳಿ ಆತನ್ನೇ ಬೇಕಾದ್ರೆ. ನನ್ಮಾತ್ ಕೇಳಿಸ್ತೆ? ಏಳೀ ಏಳೀ ನನ್‌ಬಾಯಿ ನೊಂದದ್ದೊಂದೇ! ಈಗ "ಆಕ್ಸಲ್" ಓಗಿ "ಆಕ್ಸ್‌ಡಂಟ್" ಆದ್ರೆ ನಮ್ ತಪ್ಪೆ?

**ಕವಿ:** [ಉದ್ವೇಗದಿಂದ] ಇದು ನಿಜವೇ? ನೀನು ನಿಜವನ್ನೇ ಹೇಳ್ತಿದ್ದೀಯಾ?

**ಚನ್ನಯ್ಯ:** ನೀವು ಆತನ್ನೇ ಕೇಳಿ ಬೇಕಾದ್ರೆ—ನನ್ ಮುಂದೇ ಕೇಳಿ. ನನ್ ಮಾತು ಸುಳ್ಳೆನ್ಸಿ ನೋಡಾನ. ಈಗ ತಪ್ಪಿಸ್ಕೊಳ್ಳೋಕೆ ಉಪಾಯಾ ಉಡುಕಿರೋ ಅಂಗೆ ಕಾಣ್ತೇತೆ ನೋಡಿದ್ರಾ? ಇನ್ನೂ ಮುಚ್ಚಿಟ್ಕೊಂಡು ಬಿದ್ದಿರ್ಬೇಕೆ? ಈಗ್ರಿ ಳೀಲಿಲ್ವೆ ಆತನ್ ಬಂಡ್ವಾಳಾ? ಇನ್ ಸುಮ್ನಿದ್ದು ಪಲ್ವಿಲ್ಲ. ಇನ್ಮುಂದೇ ಏನ್ಮಾಡ್ಬೆಕೋ ಮಾಡೋಣ.

[ಕವಿ ಕಲ್ಲಿನ ಗೊಂಬೆಯಂತೆ ಕುಳಿತಿದ್ದಾನೆ]

**ವೀರಯ್ಯ:** ಸ್ವಾಮಿ! ಕವಿಗಳೇ! ನಮ್ ಕಷ್ಟಾ-ನಷ್ಟಾ, ಬಾಳೂ-ಗೋಳೂ ಎಲ್ಲಾ ನಿಮ್ಗೆ ತಿಳ್ಯೋದು. ನೀವಾದ್ರೂ ಏಳ್ಬಾರ್ದೆ ನ್ಯಾಯಾ?

**ಹರೀಂದ್ರ:** ನ್ಯಾಯ! ಎಲ್ಲಿದೆ ನ್ಯಾಯ? ಈ ಪ್ರಪಂಚದಲ್ಲಿ ನ್ಯಾಯ ಎನ್ನೋದಿದ್ರೆ ಕವಿಗಳೆಲ್ಲಾ ಹೊಟ್ಟೆಗಿಲ್ದೆ ಬಿದ್ದು ಸಾಯಬೇಕೆ? ಈ ಕವಿ ನಮ್ ಪಕ್ಷಾ ಹಿಡಿದು ಮಾತಾಡ್ಬೇಕೇ? ನಿಮ್ ಕಷ್ಟ ಸುಖ ಬರೀ ಬೇಕೆ? ನೀವೇನಾದರೂ ಒಂದು ದಿನ ಕವಿಯ ಪೋಷಣೆ ಮಾಡಬಲ್ಲಿರಾ? ನಿಮಗೇ ಹೊತ್ತು ಹೊತ್ತಿಗೆ ಕೂಳಿಲ್ಲ. ನೀವು ಕವಿಗೆ ಏನು ತಾನೇ ಮಾಡಬಲ್ಲಿರಿ? ಭೋಜನ ಇಕ್ಕಬಲ್ಲಿರಾ? ರಾಯರಂತೆ ರತ್ನಗಳನ್ನು ಕೊಟ್ಟೇರಾ?

**ವೀರಯ್ಯ:** ಹೊಟ್ಟೇ ಹಸ್ದು, ಕರುಳು ಕತ್ತರ್ಸಿ ನಾವೇ ಸಾಯ್ತಾ ಇರೋವಾಗ, ಅವ್ರಿಗೆ ಏನ್‌ತಾನೇ ಮಾಡೋಕಾದೀತು?

**ಚನ್ನಯ್ಯ:** ಅಂಗಾದ್ರೆ ಈ ಪರ್ಪಂಚಾ ಎಲ್ಲಾ ದುಡ್ಡಿನೋರ್ದೇನಾ ?

**ವೀರಯ್ಯ:** ಬಡ್‌ವರ್‌ನ ಕಣ್ಣೆತ್ತಿ ನೋಡೋರೇ ಇಲ್ವಾ?

**ಹರೀಂದ್ರ:** ನಿಜ! ಈಗ ನೋಡಿ. ಸಾವುಕಾರ್ರು ಇವರನ್ನು ಪೋಷಿಸ್ತಾರೆ. ಸುಡುಗಾಡಿಗೆ ಹೋಗಿದ್ದ ಮನುಷ್ಯನ್ನ ಮನೆಗೆ ತಂದು, ಹಾಲೂ-ಹಣ್ಣು ತಿನ್ನಿಸಿ ಬೆಳೆಸಿದಾರೆ! ಆತನ ಕವಿತಾ ಪುಷ್ಪಗಳನ್ನು ನಿಸ್ವಾರ್ಥದಿಂದ ಪ್ರಪಂಚದ ಮೇಲೆ ಎರಚ್ತಿದಾರೆ! ಕನ್ನಡ ಸಾಹಿತ್ಯಕ್ಕೆ ಅಮೋ...ಘ ಸೇವೆ ಸಲ್ಲಿಸ್ತಿದಾರೆ! ನೀವು ಏನು ಮಾಡಬಲ್ಲಿರಿ ?! ನಿಮ್ಮಂತೆ ಹುಲ್ಲು ಗುಡಿಸಲಿನಲ್ಲಿ ಇಡಬಲ್ಲಿರಿ. ನಿಮ್ಮಂತೆಯೇ ಹೊಟ್ಟೆ ಹಸಿದುಕೊಂಡು 'ಇರು' ಎನ್ನುವಿರಿ! ಹುಂ! ನಿಮ್ಮ ಈ ಬೆವರು ವಾಸನೆಯಲ್ಲಿ ಕುಳಿತರೆ ಕವಿತಾ-ಕಾಮಿನಿ ಒಲಿದಾಳೆ, ಎಲ್ಲಿಯಾದರೂ ?! [ಕವಿ ತಲೆಯೆತ್ತಿ ನೋಡುತ್ತಾನೆ. ಆತನನ್ನು ಕುರಿತು] ನಿಮಗಲ್ಲ ಹೇಳಿದ್ದು. [ಬೆರಳು ತೋರಿಸಿ] ಈ ಕೂಲಿಕಾರರಿಗೆ ಹೇಳುತಿದ್ದೀನಿ. [ಇತರರನ್ನು ಕುರಿತು] ಕವಿಗೆ ಪ್ರಪಂಚದೊಡನೆ ಸಂಬಂಧವಿಲ್ಲ! ಆತನದು ಬರಿಯ ಕಲ್ಪನೆಯ ಸಾಮ್ರಾಜ್ಯ! ಆ ಕಲ್ಪನೆಯ ಸಾಮ್ರಾಜ್ಯದಲ್ಲಿ ಸವಿಗನಸುಗಳು! ಆ ಕನಸುಗಳಲ್ಲಿ ಪ್ರೇಮಗೀತೆಗಳು! ಆ ಪ್ರೇಮಗೀತೆಗಳಲ್ಲಿ "ಓಂ ಸತ್ಯಂ ಶಿವಂ ಸುಂದರಂ"!

**ಕವಿ:** [ಸಿಟ್ಟಿನಿಂದ] ಹರೀಂದ್ರ!

**ಹರೀಂದ್ರ:** ಓ! ಕೋಪ ಬಂತೇ ? ಅಷ್ಟೊಂದು ಅಗಮ್ಯ ಗೋಚರವಾಗಿದ್ದವರಿಗೆ ಇಷ್ಟೊಂದು ಸಿಟ್ಟೆ ? ಓಹೋ! ನಾನು ಮರ್ಯಾದೆ ಕೊಟ್ಟು ಮಾತನಾಡಲು ಕಲಿಯಬೇಕು! ಆದರೆ ಈ ಪ್ರಪಂಚದಲ್ಲಿ ನನಗೆ ಇನ್ನೇನು ತಾನೇ ಮರ್ಯಾದೆ ಇದೆ, ನೀವೇ ಹೇಳಿ! ಈ ಜನತೆ, ಈ ಯೂನಿಯನ್, ಈ ದೇಶ-ಇಂಥ ದೊಡ್ಡ ದೊಡ್ಡ ವ್ಯರ್ಥ ಶಬ್ದಾಡಂಬರ ಬಿಟ್ಟು, ಬೇರೆ ನನಗೇನು ಗೊತ್ತು ? ನೀವು ಕವಿಗಳು! ಓಹೋಹೋ! ಮರತೇಬಿಟ್ಟೆ! ನೀವು ಕವಿಗಳೇ ಅಲ್ಲ, ಅಲ್ಲವೆ ?

**ಕವಿ:** ಹರೀಂದ್ರ! ನನ್ನನ್ನೇಕಪ್ಪಾ ಪೀಡಿಸುತ್ತಿ ? ಸಾಕಿನ್ನು.

ಒಳ್ಳ್ಯೋರು. ಅಪ್ಪನ್ ನೋಡೋಕ್ ಬಂದಿದ್ರು. ಅಪ್ಪನ್ನೋಡಿ ಅವ್ರಿಗೆ ತುಂಬಾ ವ್ಯತೆ ಆಯ್ತು. ಹತ್ರೂಪಾಯ್ ತಕ್ಕೊಟ್ರು.

**ಚನ್ನಯ್ಯ:** ಕೊಟ್ರಂತೆ, ಕೊಟ್ರು! ಆ ನೋಟ್‌ನ ಅಲ್ಲೇ ಅರ್ದುಬಿಸಾಕ್ಬಾರ್ದಾ? ಕೊಟ್ಲಂತೆ; ಏನ್ಮಾಡ್ದಾ ಕೊಡೋದು? ಈ ಕಂತೆ ಪುರಾಣಾನೆಲ್ಲಾ ನಂಗೇಳ್‌ಬ್ಯಾಡ. ಅಂತಾ ಒಳ್ಳ್ಯೋಳಾಗಿದ್ರೆ ಅವ್ರಣ್ಣನ್‌ಗೇಳಿ ಒಪ್ಪಿಸ್‌ಬಾರ್ದಾಗಿತ್ತಾ? ದಯಾಂತೆ ದಯ! ನಮ್ ರಕ್ತ ಈರಿ ಲಕ್ಷಲಕ್ಷ ರಾಶಿ ಆಕಿರೋವಾಗ, ಅತ್ರೂಪಾಯ್ ತೆಗ್‌ದು ಬಿಸಾಕ್‌ತಾರೆ. ಅವ್‌ರಾಕೋ ಅಳೇ ಚೆಪ್ಲಿ ಅತ್ರುಪಾಯಾಗ್ಬೋದು. ಅವ್ರ ಕಾರುಗ್ಳು, ಷೋಕಿಗ್ಳು, ಒಡ್ವೇಗ್ಳು, ಇವೆಲ್ಲ ಎಲ್ಲಿಂದ ಬಂತಂತೆ? ನಮ್ಮವ್ರೇ ಅಲ್ಲಾ? ಅವೆಲ್ಲಾ ಇಲ್‌ದಿದ್ರೆ ಸಾಯ್ತಾರಾ? ಅವ್‌ನ ಬಿಟ್ಟು ಈರೈನ್ನ ಬದ್ಕಿಸ್‌ಬಾರ್ದೆ? ಈಂಗೆ ಸಾಯಿಸ್ ಬೇಕಾ? ಬಿಕ್ಷ ಆಕ್ತಾರಂತೆ ಬಿಕ್ಷ! ನಾಚ್ಕೆ ಇಲ್ದೆ! ನಾನಾಗಿದ್ರೆ ಆ ನೋಟ್ನ ಅಂಗೇ ಬಿಸಾಡ್ತಿದ್ದೇ ಅವರ್ ಮುಕಕ್ಕೇನೆ! ಇದ್ರಲ್ಲಿ ದಯ ಎಲ್ ಬಂತೋ? ಇವೆಲ್ಲಾ ನಮ್ಮನ್ನೋಸಾಮಾಡೋ ಕಾಕೋ ವೇಷಗ್ಳು! ನ್ಯಾಯ್ವಾಗಿ ಕೊಡ್‌ಬೇಕಾದ್ ನುಂಗ್ಬಾಕಿ, ದಾನಾ ಮಾಡ್‌ತಾರಂತೆ, ದಾನಾ!

[ಈ ಮಾತು ಮುಗಿಯುವುದರೊಳಗಾಗಿಯೇ—ಹೊರಗೆ ನಿಂತು ಎಲ್ಲವನ್ನೂ ಕೇಳುತ್ತಿದ್ದ ಶೋಭಾ ಒಳಗೆ ಬರುತ್ತಾಳೆ.]

**ಶೋಭಾ:** ಸಾಕು, ಸಾಕು!

**ರಂಗ:** [ಗಾಬರಿಯಿಂದ] ಅಮ್ಮಾವ್ರೋರು!

**ವೀರಯ್ಯ:** [ಸಖೇದಾಶ್ಚರ್ಯದಿಂದ] ಅಮ್ಮಾವ್ರೋರು?!

**ಚನ್ನಯ್ಯ:** [ಸೂಕ್ಷ್ಮ ತಿರಸ್ಕಾರದಿಂದ] ಅಮ್ಮಾ....ವ್ರೋರು!!!

[ಒಂದು ಕ್ಷಣ ನಿಶ್ಶಬ್ದ—ಶೋಭಾಳ ಮುಖದಲ್ಲಿ ಒಂದು ವಿಧವಾದ ಕಾಂತಿ ಯಿದೆ; ಹೊಸ ಶೋಭೆ! ನಿಲ್ಲಲಾರದೆ ಮೂರ್ಛೆ ಬೀಳುವುದರಲ್ಲಿದ್ದಾಳೆ. ಮರು ಕ್ಷಣದಲ್ಲಿಯೇ ಚೇತರಿಸಿಕೊಳ್ಳುತ್ತಾಳೆ. ಕಡಿ ಕಣ್ಣುಗಳಲ್ಲಿ ಕಂಬನಿಗಳು ಕಾಣುತ್ತಿವೆ.]

**ಶೋಭಾ:** [ತನ್ನ ಚೀಲದಿಂದ ಹಣ ತೆಗೆದು] ಇಗೋ, ತಗೋ! [ಚನ್ನಯ್ಯ

ನಿಗೆ ಕೊಡ ಹೋಗುತ್ತಾಳೆ. ಚನ್ನಯ್ಯನು ತೆಗೆದುಕೊಳ್ಳಲು ಹಿಂಜರಿಯು ತ್ತಾನೆ.]

**ಶೋಭಾ:** ಪರವಾಯಿಲ್ಲ. ತಗೋ! ನಾನು ನಿನಗೇನೂ ದಾನ ಕೊಡು ತ್ತಿಲ್ಲ; ಕನಿಕರಿಸಿ ಕೊಡುತ್ತಿಲ್ಲ. ತಗೋ— [ಚನ್ನಯ್ಯ ತೆಗೆದು ಕೊಳ್ಳುವುದಿಲ್ಲ]

**ವೀರಯ್ಯ:** ಕ್ಷಮ್ಸಿ ತಾಯಿ! ಬುದ್ಧಿಯಿಲ್ದೋನು! ಏನೇನೋ ಒದರಾ ಡ್‌ತಿದ್ದ-ಏನೂ ತಿಳ್ಕೋಬ್ಯಾಡಿ.

**ಶೋಭಾ:** [ಕೇಳದವಳಂತೆಯೇ] ತಗೊಳ್ಳಪ್ಪಾ! ಇದು ನಿಮ್ಮದೇ ಕಷಾ ರ್ಜಿತ. ನಿಮ್ಮ ಒಡವೆ, ನನ್ನದಲ್ಲ. ನೀನು ಹೇಳಿದ್ದೆಲ್ಲಾ ನಿಜ. ನಿನ್ನ ಮಾತುಗಳಿಂದ ನನಗೆ ಬುದ್ಧಿ ಬಂತು. ನಿನ್ನ ಮಾತಿನಲ್ಲಿ ಸಾಕ್ಷಾತ್ ದೈವವಾಣಿ ಇದೆ! ನನ್ನ ವಿಷಯ ನನಗೆ ಇಷ್ಟು ವಿಶದವಾಗಿ ಇದು ವರೆಗೆ ತಿಳಿದಿರಲಿಲ್ಲ. ನಾನು ಎಷ್ಟೋ ಒಳ್ಳೆಯವಳೆಂದೇ ಭಾವಿ ಸಿದ್ದೆ; ಹೆಮ್ಮೆ ಪಟ್ಟದ್ದೆ. ಆದರೆ ಈಗ ನಿನ್ನಿಂದ ಒಳ್ಳೆಯತನವೆಂದರೆ ಏನೂಂತ ಕಲಿತುಕೊಂಡೆ. ನಾನು ನಿಮಗೆ ದಾನ ಮಾಡುವುದಿಲ್ಲ. ನಿಮ್ಮ ಸೊತ್ತು ನಿಮಗೇ ಕೊಡುತ್ತೇನೆ. ಅಷ್ಟೆ. ಈ ಹಣವನ್ನು ವೀರಯ್ಯನ ಖರ್ಚುಗಳಿಗೆ ಉಪಯೋಗಿಸು. ತಗೋ! [ಚನ್ನಯ್ಯ ವಿಗ್ರಹದಂತೆ ನಿಂತು ಆ ನೋಟುಗಳನ್ನು ತೆಗೆದುಕೊಳ್ಳುವನು.] ನೀನು ಹೇಳಿದಂತೆ—ಈ ಕಾರುಗಳು, ಈ ಷೋಕುಗಳು, ಈ ಸೌಖ್ಯಗಳೇ ನಮ್ಮನ್ನು ಹಾಳು ಮಾಡ್ತವೆ. ಇವುಗಳ ಆಸೆಯಿಂದಲೇ ನಾವು ನಿಮ್ಮನ್ನು ಪೀಡಿಸ್ತೇವೆ. ನಿನ್ನ ಸಂದೇಶದ ಪ್ರಕಾರ ಈ ಕ್ಷಣವೇ ನಾನು ಇವುಗಳ್ನ ತ್ಯಜಿಸ್ತೇನೆ!

[ಎಲ್ಲರಿಗೂ ಆನಂದಾಶ್ರು ಬರುವಂತಾಗುತ್ತದೆ—ಚನ್ನಯ್ಯನಿಗೂ ಸಹ! ಶೋಭಾಳ ಕಣ್ಣಿನಿಂದ ಎರಡು ಹನಿಗಳುದುರುತ್ತವೆ ಶೋಭಾ ಹೊರಡಲನು ವಾಗುತ್ತಾಳೆ. ವೀರಯ್ಯ ನಿಲ್ಲುತ್ತಾನೆ. ಶೋಭಾ ಆತನ ಬಳಿ ಹೋಗಿ ಎಷ್ಟೋ ಅಭಿಮಾನದಿಂದ ಆ ಮುರಿದ ಕೈಯನ್ನು ನೇವರಿಸುತ್ತಾಳೆ. ವೀರ ಯ್ಯನು ವಿವಶನಾಗಿದ್ದಾನೆ. ಶೋಭಾ ಹೊರಡುತ್ತಾಳೆ. ಹೋಗುತ್ತಾ ಕೇಳು ತ್ತಾಳೆ.]

**ಶೋಭಾ:** ಕವಿಯವರು ಬಂದಿದ್ದರೆ?

**ಚನ್ನಯ್ಯ:** ಬರಲಿಲ್ರಮ್ಮ.

**ಶೋಭಾ:** ಹರೀಂದ್ರರು ?

**ರಂಗ:** ಅವ್ರೂ ಬರ್ಲಿಲ್ಲ.

**ಚನ್ನಯ್ಯ:** ದಾಸಪ್ನೋರು ನಿಮಗೋಸ್ಕ್ರ ಬಂದ್ಹೋದ್ರು.

**ಶೋಭಾ:** ಬಂದು ಹೋದರೆ ? ಕವಿಗಳು ಬಂದ ತಕ್ಷಣ ಬಂಗಲೆಗೆ ಬರ ಹೇಳು. ತುಂಬಾ ಜರೂರು ಕೆಲಸವಿದೆ. ತಪ್ಪದೆ ಬರಬೇಕು, ನಾನು ಹೇಳಿದೆ—ಎಂತ ಹೇಳು. [ಶೋಭಾ ಹೋಗುತ್ತಾಳೆ.]

**ವೀರಯ್ಯ:** [ಶೋಭಾ ಹೋದಮೇಲೆ ಸಿಟ್ಟಿನಿಂದ] ಸುತ್ಮುತ್ಲೂ ನೋಡಿ ಮಾತಾಡ್ಬಾರ್ದೇನೋ ? ಬಾಯ್ಗೆ ಬಂದಾಗ್ಲಬರ್ಟೋದೇ ?

**ಚನ್ನಯ್ಯ:** ಊಂ ! ಈಗೇನ್ಮಹ್ಹೋಗ್ಲಿಲ್ಲ !

**ವೀರಯ್ಯ:** ಮಹ್ಹೋಗ್ಲಿಲ್ವಂತೆ! [ತುಂಬಾ ಸಿಟ್ಟು ಬಂದಿದೆ. ಎದ್ದು ತನ್ನ ಕೈ ಎತ್ತಲು ಪ್ರಯತ್ನಿಸುವನು. ಬಾಧೆಯಿಂದ ಮತ್ತೆ ಮಲಗುವನು.]

**ರಂಗ:** ಅಲ್ಲ ಮಾವಾ ! ನಾನ್ ಹೇಳಿದ್ರೆ ನೀನ್ ಕೇಳ್ಲಿಲ್ಲ. ಈಗ್ ನೋಡ್ದ್ಯೋ ಇಲ್ವೋ, ಆಯಮ್ಮಾ ಎಷ್ಟೊಳ್ಳ್ಯೋಳೂಂತ !

**ಚನ್ನಯ್ಯ:** ಏನೋ ಏಳು ! ಯಾರು ನೋಡಿದ್ದಾನೆ ?!

**ವೀರಯ್ಯ:** ಅವಿವೇಕಿ ! ಒಂದೇ ಮಾತ್ಯಾವಾಗ್ಲು ! ಹಟಾನೇ ಬಿಡೋದಿಲ್ಲ !

**ಚನ್ನಯ್ಯ:** [ರಂಗನನ್ನು ಕುರಿತು] ಲೋ ! ಭದ್ರ ! ನೋಡಿಕೊಂಡಿರು. ನಾನೀಗ್ಲೇ ಬರ್ತೇನೆ. [ಚನ್ನಯ್ಯ ಹೋಗುತ್ತಾನೆ.]

[ಹರೀಂದ್ರ ಮತ್ತು ಕವಿ ಬರುತ್ತಾರೆ.]

**ರಂಗ:** ಅಪ್ಪಾ ! ಕವಿಯೋರು ಬಂದಿದ್ದಾರೆ.

**ವೀರಯ್ಯ:** ಕವಿಗ್ಳೇ ! ಬನ್ನಿ ಸ್ವಾಮಿ ! ದಯ್ಮಾಡ್ಸಿ ! [ನಮಸ್ಕಾರ ಮಾಡಲು ಕೈ ಎತ್ತುತ್ತಾನೆ; ಒಂದೇ ಕೈ ಬರುತ್ತದೆ. ತನ್ನ ಇನ್ನೊಂದು ಕೈ ಮುರಿದಿದೆಯೆಂದು ದುಃಖಿಸಿ] ನಮಸ್ಕಾರಾ ಮಾಡೋಕೂ ಕೈಯಿಲ್ದೆ ಓಯ್ತು ಸ್ವಾಮಿ !

[ಕವಿಯು ವೀರಯ್ಯನ ಮಂಚದ ಹತ್ತಿರ ನೋಡುತ್ತ ನಿಲ್ಲುವನು.]

**ವೀರಯ್ಯ:** ಲೋ ! ರಂಗ ! ಕವಿಗ್ಳಿಗೆ ಕೂತ್ಕೊಳ್ಳೋಕೆ ಏನಾದ್ರೂ

ತಗೊಂಬಾಪ್ಪಾ. [ಕವಿಯನ್ನು ಕುರಿತು] ನಮ್ಮಂತಾ ಬಡ್ವರ ಕಷ್ಟ ಎಷ್ಟ್ ಚೆನ್ನಾಗಿ ಬರೀತೀರಪ್ಪ. ನೀವು ?! ನಮ್ಮೇಲೆ ದಯಾ ತೋರ್ಸೋರು ನೀವೊಬ್ರೆ ಸ್ವಾಮಿಾ. ನಿಮ್ಮನ್ನ್ ನಾವೆಲ್ಲಾ ಶಂಪೊತ್ನೇಗೆ ನೆನಸ್ಕೋತೇವೆ. ಆದ್ರೆ ನೀವೆಷ್ಟ್ ಬರೆದ್ರೆ ತಾನೇ ಏನ್ ಸ್ವಾಮಿಾ! ನಮ್ ಗತಿ ಇದ್ವರ್ಗೂ ಇಷ್ಟೇ! ಸಾವ್‌ಕಾರ್ರು ಮನ್‌ಸು ಬದ್ಲಾಯಿಸಾಕಿಲ್ಲ....ನಮ್ ರಂಗ ನಿಮ್ ಹಾಡುಗ್ಳೆಲ್ಲಾ ಸೊಗ್ಸಾಗಿ ಹಾಡ್‌ತಾನೆ. ಆ ಹಾಡುಗ್ಳೆಂದ್ರೆ ನಮ್ಗೋರ್ಗೆಲ್ಲಾ ತುಂಬಾ ಕುಶಿ! ಲೋ, ರಂಗ! ಒಂದ್ಹಾಡೇಳೋ.

**ರಂಗ:** ಇವರ್ದೆಲ್ಲಪ್ಪಾ. ಆ ಹಾಡುಗಳೂ!

**ವೀರಯ್ಯ:** ಆಂ! ನಮ್ ಹಾಡುಗ್ಳು ಇವ್ರು ಬರ್ದಿದ್ದಲ್ವೆ? [ಕವಿ ದುಃಖಿಸುವನು.]

[ತೆರೆಯ ಹಿಂದೆ ಬಡಿದಾಟದ ಶಬ್ದ. "ಹಿಡೀರಿ! ಹಿಡೀರಿ! ಬಡ್ಡೀ ಮಕ್ಳನ್ನ! ಓಡಿ ಹೋಗ್ತಿದ್ದಾರೆ!" ಎಂದು ಚನ್ನಯ್ಯನು ಕೂಗುತ್ತಾ ರಂಗದೊಳಕ್ಕೆ ಓಡಿ ಬರುತ್ತಾನೆ. ತಲೆಯ ಮೇಲಿನ ಗಾಯದಿಂದ ರಕ್ತ ಸುರಿಯುತ್ತಿದೆ.]

**ಚನ್ನಯ್ಯ:** ಓಡೋದ್ರು ಬಡ್ಡಿ ಮಕ್ಳು! ಎದ್ರಿಗೆ ಸಿಕ್ಕಿದ್ರೆ ಬುರ್‌ಡೆ ಒಡ್ದಾಕ್‌ಬಿಡುತಿದ್ದೆ.

**ಹರೀಂದ್ರ:** ಚನ್ನಯ್ಯಾ! ಏನಾಯ್ತು?

**ಚನ್ನಯ್ಯ:** ಧೀರರು ಬಂದಿದ್ದಾರೆ, ಇಂದ್ನಿಂದಾ ತಿವ್ದ್ ಓಡೋಗೋಕೆ ಕಳ್ ಸೂಳೆ ಮಕ್ಳು! ನಿಂತಿದ್ರೆ ತಿಳೀತಿತ್ತು ಚನ್ನೈನ ಕೈ!

**ಹರೀಂದ್ರ:** ರಂಗಾ! ನೀರು ತಗೊಂಡ್‌ಬಾ.

[ಪಂಚೆ ಹರಿದು, ಕಟ್ಟು ಕಟ್ಟಿ, ಇನ್ನೊಂದು ತುಂಡನ್ನು ನೀರಿನಲ್ಲಿದ್ದಿ ಚೆನ್ನಯ್ಯನ ಮುಖವನ್ನೂ ತಲೆಯನ್ನೂ ಒರೆಸುತ್ತಾನೆ.]

**ವೀರಯ್ಯ:** ಯಾರಪ್ಪಾ ಆ ಭೂಪತಿಗಳು? ಮಾತಾಡಲಾರ್ದೆ ಇಂದ್ನಿಂದ ಹೀಗೆ ಸಾಧಿಸೋ ವಸ್ತಾದಿಗಳು!

**ಹರೀಂದ್ರ:** ಇನ್ಯಾರು? ಸಾವ್ಕಾರ್ರ ಸಿಬ್ಬಂದಿ! ದುಡ್ಡಿನೋರು ಬಡವರ್ನ ಸತಾಯಿಸೋದು ಹೀಗೇ ಕಡೇಗಾಲಕ್ಕೆ! ಇನ್ನೂ,

**ಹರೀಂದ್ರ:** ಪೀಡಿಸುತ್ತೇನೆಯೇ ? ಅಜ್ಞಾನದಲ್ಲಿ, ಅರೆ ಹೊಟ್ಟೆಯಲ್ಲಿ ವಿಲಿ ವಿಲಿ ಒದ್ದಾಡುತ್ತಿರುವ ಈ ಅಸ್ಥಿಪಂಜರಗಳು ನಿಮಗೆ ಕಾಣಿಸುತ್ತಿವೆಯೇ ? ಅವರ ಕರುಳ ಕೂಗು ನಿಮಗೆ ಕೇಳಿಸುತ್ತಿದೆಯೇ ? ಇವರೆಲ್ಲರೂ ಮನುಷ್ಯರೇ ತಾನೇ ! ಈ ಜನರೇ ನಮ್ಮ ದೇಶ, ರಾಷ್ಟ್ರ—ಎಲ್ಲವೂ ! ಮರೆಯಬೇಡಿ ಇದನ್ನು ಕವಿಗಳೇ ! ನೀವೇ ಆಲೋಚಿಸಿ ನೋಡಿ. ಇನ್ನಾದರೂ ನಿಮ್ಮ ಲೇಖನಿಯನ್ನು ಈ ಶ್ರಮಜೀವಿಗಳಿಗಾಗಿ ಮೀಸಲಿಡುವಿರೋ-ಅಥವಾ ಸಿರಿವಂತರ ಆಶ್ರಯವೇ ಸ್ವರ್ಗವೆಂದುಕೊಂಡು, ಅವರ ಕಾಮುಕತೆಗೆ ಬಣ್ಣ ಕೊಟ್ಟು, ಉದ್ರೇಕಿಸುವಂತಹ ಪ್ರಣಯ ಗೀತೆಗಳನ್ನೇ ಬರೆಯುವಿರೋ ? ಈಗಲೇ ನಿರ್ಣಯಿಸಿಕೊಳ್ಳಿ. ದೇಶ ದೇಶಗಳೇ ಹಾಳಾದರೂ ನಾವು ಕಣ್ ತೆರೀಲಿಲ್ಲ. ನಮ್ಮ ಸಾಹಿತ್ಯ ಮೊದಲಿನಿಂದಲೂ ಹೀಗೆಯೇ ಕುಂಟುತ್ತ ಕುಣಿಯುತ್ತ ಬಂದಿದೆ ! ಮುಂದುವರೆಯಲಿಲ್ಲ. ಕವಿಗಳು ಜನತೆಗಾಗಿ ಜೀವಿಸುವ ದೇಶಗಳತ್ತ ನಮ್ಮ ದೃಷ್ಟಿಯೇ ಹೋಗೋದಿಲ್ಲ. ನಮ್ಮ ದೇಶದಲ್ಲಿ ಇಂದಿಗೂ ಅದೇ ಹಳೆಯ ಪರಿಸ್ಥಿತಿ ! ಇದು ನಮ್ಮ ದೌರ್ಭಾಗ್ಯ ! ಕವಿಗಳೇ ! ಇನ್ನಾದರೂ ಒಮ್ಮೆ ಕಣ್ಣು ಬಿಟ್ಟು **ನೋಡಿ !**

**ಕವಿ:** [**ಸಂಪೂರ್ಣ ಬೆಳಕು ಕಂಡವನಂತೆ**] ಹರೀಂದ್ರ ! [**ಎರಡೂ ಕೈಗಳಿಂದ ಬಾಚಿ ಹರೀಂದ್ರನನ್ನು ತಬ್ಬಿಕೊಳ್ಳುತ್ತಾನೆ. ಹರೀಂದ್ರ ಹರ್ಷಿತನಾಗಿ ಕವಿಯ ಬೆನ್ನು ತಟ್ಟುತ್ತಾನೆ. ಕವಿಯ ಕಣ್ಣುಗಳಿಂದ ಆನಂದಾಶ್ರುಗಳುದುರುತ್ತವೆ.**] ಎಷ್ಟೊಂದು ಪವಿತ್ರ ದೇವಾಲಯಗಳು! ಎಷ್ಟೊಂದು ದೇವರುಗಳು ! ಇವೆಲ್ಲವನ್ನೂ ಇಂದು ನೋಡಿದೆ ! ತಿಳಿದುಕೊಂಡೆ. ನನ್ನ ಜನ್ಮ ಸಾರ್ಥಕವಾಯಿತು. ಹರೀಂದ್ರ! ನಿನ್ನಿಂದ ನನಗೆ ಪುನರ್ಜನ್ಮ ಪ್ರಾಪ್ತಿಯಾಯಿತು. ಮಹಾ ಪ್ರಸಾದ ! ನನ್ನನ್ನು ರಸಾತಲದಿಂದ ಮೇಲಕ್ಕೆತ್ತಿ, ಹೊರಗೆಳೆದು, ನೀನು ಉದ್ಧಾರ ಮಾಡಿದೆ !

**ಹರೀಂದ್ರ:** ಕುಳಿತುಕೋ ! ಕುಳಿತುಕೋ !

**ಕವಿ:** ಒಂದು ಗಂಟೆಯಿಂದ ನನ್ನನ್ನು ಆವರಿಸಿದ್ದ ಬಿರುಗಾಳಿ ಶಾಂತವಾಯಿತು. ನನ್ನಲ್ಲಿ ಉರಿಯುತ್ತಿದ್ದ ಮಹಾಜ್ವಾಲೆ ತಣಿಯಿತು.

ನನ್ನಲ್ಲಿ ಉದ್ರೇಕಗೊಂಡಿದ್ದ ಬಾಧೆ ನಿವಾರಣೆಯಾಯಿತು. ಅಬ್ಬಬ್ಬ! ಇದೊಂದು ಶುಭ ದಿನ ! ಗೌತಮ ಬುದ್ಧನು ತನ್ನ ರಾಜ ಭೋಗಗಳನ್ನು ತ್ಯಜಿಸಿದಂತಹ ಪುಣ್ಯ ದಿನ !

**ಹರೀಂದ್ರ:** ವಿಶ್ರಾಂತಿ ತಗೋ. ನಿಧಾನವಾಗಿ ಆಲೋಚಿಸಿ, ನಿನ್ನ ಕರ್ತವ್ಯವೇನೆಂಬುದನ್ನು ನೋಡು.

**ಕವಿ:** ನಾನೆಂತಹ ನರಕದಲ್ಲಿದ್ದೇನೆ ! ಎಂತಹ ಹಾವಿನ ಹೆಡೆಯ ನೆರಳಲ್ಲಿ ವಿಶ್ರಮಿಸುತ್ತಿದ್ದೇನೆ ! ಇದುವರೆಗೂ ನನ್ನ ಕಣ್ಣು ಕಟ್ಟಿತ್ತು. ಇನ್ನು ಅಲ್ಲಿರುವುದಿಲ್ಲ. ಆ ಮೋಸದಲ್ಲಿ ಒಂದು ಕ್ಷಣವೂ ಇನ್ನು ಸಿಕ್ಕಿ ಬೀಳುವುದಿಲ್ಲ. ತಕ್ಷಣ—

**ಚನ್ನಯ್ಯ:** ನೀವು ತಕ್ಷಣ—ಬಂಗಲೇಗೋಗ್‌ಬೇಕಂತೆ ಸೋಬಮ್ಮ ಬಂದೇಳಿ ಓದ್ರು. ತಪ್‌ದೇ ಓಗ್ಲೇ ಬೇಕಂತೆ—ಈಗ್ಲೇ !

**ಕವಿ:** ಯಾರು, ಶೋಭಾ ಹೇಳಿದಳೇ ? ಯಾಕೆ ?

**ಚನ್ನಯ್ಯ:** ಏನೋ ಬಾಳಾ ಅರ್ಜಂಟ್ ಕೆಲ್‌ಸಾ ಇದ್ಯಂತೆ. ದಾಸಪ್ಪಾ ಕೂಡಾ ಬಂದೋದ್ರು. ಅವ್‌ರೂ ನಿಮ್ಮನ್ ಕರ್ದೋದ್ರು.

**ಕವಿ:** ಸರಿ ಹಾಗಾದರೆ. ಹೋಗಿ ಒಂದೇ ಸಲ ಅಪ್ಪಣೆ ತಗೊಂಡು ಬಂದು ಬಿಡ್ತೀನಿ.

[**ಹೀಗೆಂದು ಹೊರಡಲನುವಾಗುವನು.**]

**ಹರೀಂದ್ರ:** ಆಗಬಹುದು. ಆದರೆ ಆ ಕೆಲಸ ನೀನು ತಿಳಿದುಕೊಂಡಿರುವಷ್ಟು ಸುಲಭವಲ್ಲ. ಹೋಗು, ನಿನಗೇ ಗೊತ್ತಾಗುತ್ತೆ.

**ಕವಿ:** ಅದೇನು ? ಹಾಗೆ ಹೇಳುತ್ತೀರಿ ?!

**ಹರೀಂದ್ರ:** ಅಯ್ಯೋ ಹುಚ್ಚ ! ಇಷ್ಟು ದಿನ ನಿನ್ನನ್ನು ಪೋಷಿಸಿದವನು ಅಷ್ಟು ಸುಲಭವಾಗಿ ನಿನ್ನನ್ನು ಶತ್ರು ಸೈನ್ಯದಲ್ಲಿ ಸೇರಬಿಡುವನೇ ? ನೋಡಿ ನೋಡಿ, ತಿಳಿದೂ ತಿಳಿದೂ, ಆತ ನಿನ್ನನ್ನು ಹೋಗಗೊಡುವುದೂ, ನಮ್ಮ ಸರಕಾರ ಜನತೆಗೆ ಸ್ವಾತಂತ್ರ್ಯ ಕೊಡುವುದೂ—ಎರಡೂ ಒಂದೇ !

ಕವಿ: ನಾನು ಸ್ವತಂತ್ರನು !

ಹರೀಂದ್ರ: ಸ್ವಾತಂತ್ರ್ಯವನ್ನೇ ನೀನು ಕಳೆದುಕೊಂಡಿದ್ದದ್ದು! ಈ ವಿಷಯ ಈಗ ನಿನ್ನ ಮನಸ್ಸಿಗೆ ಬಂದಿದೆ. ಆದರೂ ಆತ ನಿನ್ನನ್ನು ಸುಲಭ ವಾಗಿ ಬಿಡೋದಿಲ್ಲ. ತಿಳಿದಿರಲಿ.

ಕವಿ: ಏನು ಮಾಡಿಯಾನು ?

ಹರೀಂದ್ರ ಏನಾದರೂ ಮಾಡಬಹುದು!

ಕವಿ ........ ! [ಆಶ್ಚರ್ಯವನ್ನು ಸೂಚಿಸುತ್ತಾನೆ.]

ಚನ್ನಯ್ಯ: ಆತ ಏನು ಮಾಡಿಯಾನು ? ನಾವ್ ಇಷ್ಟ್ ಜನಾ ಇರೋ ವಾಗ ಸುಮ್ನೇ ಬಿಟ್ಟೇವೇ, ಹಾಗೇನಾದ್ರೂ ಆದ್ರೆ ?! ನಮ್ ದೇಹದಲ್ಲಿ ಪ್ರಾಣಾ ಒಂದಿದ್ರೆ, ಇವ್ರೇನೂ ಬಯ ಪಡ್ ಬೇಕಾಗಿಲ್ಲ.

ಕವಿ: ಬಂಧು! ನಾನು ಇದುವರೆಗೆ ನಿಮಗೆ ಮಾಡಿದ ದ್ರೋಹಕ್ಕೆ ನೀವು ನನಗಾಗಿ ಜೀವ ಕೊಡ್ತೀರಾ ?! ನನ್ನ ಗುಂಡಿಗೆ ಒಡೆದು ಹೋಯಿತು. ಎಲ್ಲಿ ! [ಚನ್ನಯ್ಯನನ್ನು ಬಾಚಿ ತಬ್ಬಿಕೊಳ್ಳುತ್ತಾನೆ] ರಂಗಾ! ಬಾಪ್ಪಾ! ಒಂದು ಹಾಡು ಹೇಳು, ಕೇಳೋಣ.

[ರಂಗನು ಹಾಡುತ್ತಾನೆ ಹರೀಂದ್ರ ದನಿಗೂಡಿಸುತ್ತಾನೆ. ಚನ್ನಯ್ಯ ಸಹ ಕಿರುದನಿಯಲ್ಲಿ ಹಾಡುತ್ತಾನೆ ವೀರಯ್ಯನೂ ಕೂಡ ಎದ್ದು ಕುಳಿತು ಹಾಡಿನೊ ಡನೆ ಬೆರೆಯುತ್ತಾನೆ.]

ಏಳಿ, ಎದ್ದೇಳಿ, ಎಚ್ಚರಾಗಿರೀ,
ಎಚ್ಚರಾಗಿರೀ, ಎಚ್ಚರಾಗಿರೀ
ದಲಿತ ಪ್ರಜೆಗಳ ಆಶಾಜ್ಯೋತಿಯು
[ಎಲ್ಲರೂ]
**ಕಂಡಿತೆಮಗೆ, ಕಂಡಿತೆಮಗೆ,**
**ಕಂಡಿತಿಂದೆಮಗೆ ! ಕಂಡಿತಿಂದೆಮಗೆ !!**

o o o

ಬತ್ತಿದೆದೆಯು ಉರಿಯುವೊಡಲು
ಒಂದು ಗೂಡಿ ಇದಿರಿಸಿದರೆ

[ಎಲ್ಲರೂ]

**ಲೋಕ ನಡುಗದೇ ಗಡಗಡೆನ್ನದೇ ?**
**ಶೋಕವೆಲ್ಲವೂ ಶಮನಗೊಳ್ಳದೇ ?**

o o o

ಅದೋ ಅದೋ ಅದೋ ನೋಡಿರಾಕಡೆ
ಪೂರ್ವದಿಶೆಯಲಿ ಬಡಗು ಭೂಮಿಲಿ

[ಎಲ್ಲರೂ]

**ಜನತಾ ಯುಗವದೋ ಉದಯಿಸುತ್ತಿದೆ**
**ಆ ಪಥದಿ ನಡೆಯಲು ನಮ್ಮಿಂದಾಗದೆ ?**

o o o

ನಾಳೆ ಬರುವ ಲೋಕವದು ನಮ್ಮದಲ್ಲವೇ ?
ಇಂದಿನೀ ಕಾಳರಾತ್ರಿ ಕಳೆವುದಲ್ಲವೇ ?

[ಎಲ್ಲರೂ]

**ಬಾರಿಸಿರಿ ನಮ್ಮ ನಡೆಯ ಘಂಟಾಘೋಷವ**
**ಮೊಳಗಿಸಿರಿ ಜನ ವಿಜಯದ ಜಯ ನಿನಾದವ**

ನಡೆಯಲೈ ನಡೆಯಲೈ ನಡೆಯಲೈ

**ಜನಪದವು ಮುಂದೆ ಮುಂದೆ ಭರದಿ ನಡೆಯಲೈ**

[ಸೂಚನೆ: ದಪ್ಪಕ್ಷರದ ಸಾಲುಗಳನ್ನು ಎರಡೆರಡು ಸಲ ಹೇಳಬೇಕು]

# ದೃಶ್ಯ ೪

[ಸಂಪತ್ ಬಂಗಲೆ. ಮೊದಲನೆಯ ದೃಶ್ಯದಂತೆಯೇ]

[ಶೋಭಾ ಶತಪಥ ತುಳಿಯುತ್ತಿದ್ದಾಳೆ. ದಾಸಪ್ಪನು ಅವಸರವಸರವಾಗಿ ಹಿಂದುಮುಂದಾಗಿ ನೋಡುತ್ತಾ ಜಾಗರೂಕತೆಯಿಂದ ಬರುತ್ತಾನೆ.]

**ದಾಸಪ್ಪ:** ನಿಮಗೋಸ್ಕರ ಅಲ್ಲಿಗೆ ಹೋಗಿದ್ದೆನಮ್ಮ ನಾನು.

**ಶೋಭಾ:** ಅಣ್ಣಯ್ಯ ಮನೆಯಲ್ಲಿದ್ದಾನೆಯೇ?

**ದಾಸಪ್ಪ:** ಇಲ್ಲ.

**ಶೋಭಾ:** ಹೋದ ಕೆಲಸ ಏನಾಯಿತು ?

**ದಾಸಪ್ಪ:** ದಾಸಪ್ಪ ಹೋದರೆ ಕೆಲಸ ಆಗದೆ ಇರುತ್ತದೆಯೇ ? ಆದರೂ ಅಬ್ಬಬ್ಬ! ಎಷ್ಟು ಅವಸ್ಥೆಪಟ್ಟೆ ಗೊತ್ತೆ ? ಸಾಧಿಸೋದು ಒಂದು ಪಾಲಾದರೆ, ಅದನ್ನು ಭದ್ರಪಡಿಸೋದು ಬ್ರಹ್ಮಪ್ರಯತ್ನ! ಇಷ್ಟು ಹೊತ್ತೂ ನನ್ನ ಪ್ರಾಣ ನನ್ನ ಕೈಲಿರಲಿಲ್ಲ! ದೇವರ ದಯೆ! ಸಾವ್ಕಾರ್ರಿಗೆ ಎಲ್ಲಿ ತಿಳಿದುಹೋಗುತ್ತೊ ಅಂತ-ಇದನ್ನು ಜೋಕೆಯಿಂದ ತರೋದರಲ್ಲಿ ನಂತಲೇಲಿದ್ದ ಪ್ರಾಣ ಅಂಗಾಲಿಗೆ ಬಂದ್‌ಬಿಟ್ಟಿತ್ತು!

**ಶೋಭಾ:** ಇನ್ನೆಲ್ಲಾ ಒಂದರ್ಧಘಂಟೆ! ಅದುವರೆಗೂ ಯಾರಿಗೂ ತಿಳಿಯದಿದ್ದರೆ ಸಾಕು........ಅವರಿಗೆಲ್ಲ ಎಚ್ಚರಿಕೆ ಕೊಟ್ಟಾಯ್ತೆ ? ಆಮೇಲೆ ಮೋಸಗೀಸ....!

**ದಾಸಪ್ಪ:** ಅದೆಲ್ಲ ನಾನು ಭದ್ರಪಡಿಸಿದ್ದೇನೆ. ಇಷ್ಟೊಂದು ಕೂದಲು ನರೆತ ನನಗೆ ಅಷ್ಟೊಂದು ವ್ಯವಹಾರ ಜ್ಞಾನ ಇಲ್ಲವೇ? ಇಷ್ಟಾಗಿ ಆ ಕವಿ ಬರ್ತಾರೋ ಇಲ್ವೋ!

**ಶೋಭಾ:** ನಾನು ಹೇಳಿ ಬಂದಿದ್ದೇನೆ. ತಪ್ಪದೆ ಬರ್ತಾರೆ.

**ದಾಸಪ್ಪ:** ನಾನೂ ಹೇಳಿ ಬಂದೆ.

**ಶೋಭಾ:** [ಸುತ್ತುಮುತ್ತೂ ನೋಡಿ] ಅದೆಲ್ಲಿ ? [ಕೈ ಚಾಚುವಳು]

**ದಾಸಪ್ಪ:** [ಮುಚ್ಚಿಟ್ಟುಕೊಂಡು ತಂದಿದ್ದ ಪುಸ್ತಕಗಳನ್ನು ಬಿಚ್ಚಿ ಕೊಡುತ್ತಾನೆ.] ತಗೊಂಡು ಮೊದಲು ಬಚ್ಚಿಡಮ್ಮ. ಎತ್ತಿಡು. ಭದ್ರ, ಭದ್ರ! ನಾನು ಪಟ್ಟ ಶ್ರಮವೆಲ್ಲಾ ವ್ಯರ್ಥ ಆಗಬಾರದು.] ಎಚ್ಚರಿಕೆ!

**ಶೋಭಾ:** ಇನ್ನೊಂದು ವಿಷಯ ಏನು ಮಾಡಿದೆಯಪ್ಪ?

**ದಾಸಪ್ಪ:** ಎಲ್ಲಾ ಏರ್ಪಾಟು ಮಾಡಿದ್ದೇನಮ್ಮ. ಕವಿಯವರು ಬರೋದೊಂದೇ ತಡ. ಇಷ್ಟಾಗಿ, ಆತ ಎಲ್ಲಿ ಹೋದರೋ ಏನೋ! ಒಂದು ವೇಳೆ ಅಲ್ಲಿಗೆ ಹೋಗದೆ ಇದ್ದರೆ?

**ಶೋಭಾ:** ತಪ್ಪದೆ ಹೋಗಿರುತ್ತಾರೆ, ಹರೀಂದ್ರ ಕೂಡ. ಏನೂ ಭಯವಿಲ್ಲ....ಅವರನ್ನೂ ಈಗಲೇ ಕರೆದು ಬಂದಿದ್ದೀಯಾ?

**ದಾಸಪ್ಪ:** ಸ್ವಲ್ಪ ಮುಂಚಿತವಾಗಿಯೇ ಬನ್ನಿ ಅಂತ ಹೇಳಿದ್ದೀನಿ.... ಮುಂದಾಗಿಯೇ ಬಂದರೆ ವಾಸಿ ಅಂತ.

[ಹೊರಗಡೆ ಸಂಪತ್ ಕೂಗು – 'ದಾಸಪ್ಪಾ'!]

**ದಾಸಪ್ಪ:** ಬಚ್ಚಿಡಮ್ಮ ಬಚ್ಚಿಡು. ಬಂದುಬಿಟ್ಟ ಸಂಪತ್!

[ಶೋಭಾ ಎಚ್ಚರಿಕೆಯಿಂದ ಪುಸ್ತಕ ಮತ್ತು ಹಸ್ತಪ್ರತಿಯನ್ನು ಬಚ್ಚಿಡುತ್ತಾಳೆ–ಮೇಜಿನಲ್ಲಿ. ದಾಸಪ್ಪನೊಂದು ಕಡೆ ಮತ್ತು ಶೋಭಾ ಮತ್ತೊಂದು ಕಡೆ ಹೋಗುತ್ತಾರೆ. ಒಂದು ಕ್ಷಣ ನಿಶ್ಶಬ್ದ. ಗಡಿಯಾರ ಮಾತ್ರ ಟಕ್–ಟಕ್ ಎನ್ನುತ್ತಿದೆ. ಶೋಭಾ ಏನೂ ಅರಿಯದವಳಂತೆ ಸ್ವಾಭಾವಿಕತೆಯನ್ನು ನಟಿಸುತ್ತ ತನ್ನಷ್ಟಕ್ಕೆ ತಾನು ಲಲಲಲಾಲಲ ಎನ್ನುತ್ತ ಮುಂಬರುತ್ತಾಳೆ.]

ಕಲಕಲವೆನ್ನುತಿದೆ ।
ಎಮ್ಮಯ ಕನ್ನಡ ನಂದನು
ಕಿಲಕಿಲ ನಗುತಲಿದೆ ॥

ಹೊಸ ಹೊಸದಾಗಿ ।
ತಿಳಿ ತಿಳಿಯಾಗಿ ।
ಹಾಡನು ಹಾಡುತಿದೆ ।
ಎಮ್ಮಯ ಕನ್ನಡ ಕೋಗಿಲೆ ।
ನಾಡನು ನುಡಿಸುತಿದೆ ॥

ಹೂವದು ಕುಣಿದರೆ ಹೊನ್ನಿನ ಜೇನು |
ರೆಂಬೆಯು ಕದಲಲು ಕೂ ಕೂ ಸ್ವರಗಳು |
ಹುಲು ಸಹ ಪೈರಿನ ಹಸುರಿನ ಬಯಲು |
ಕನ್ನಡ ನಾಡಿನ ಹೊನ್ನಿನ ಒಡಲು ||

[ಸ್ವಲ್ಪ ಹೊತ್ತಾದ ಮೇಲೆ ಸಂಪತ್ ಪ್ರವೇಶಿಸುತ್ತಾನೆ. ಆತನ ಹಿಂದೆಯೇ ದಾಸಪ್ಪನೂ ಬರುತ್ತಾನೆ.]

**ಸಂಪತ್:** [ಸಿಟ್ಟಿನಿಂದ] ಶೋಭಾ ಎಲ್ಲಿಗೆ ಹೋಗಿದ್ದೆ ಷಿಕಾರಿ ?

**ಶೋಭಾ:** ಪಾರ್ಕಿಗಣ್ಣಯ್ಯಾ.

**ಸಂಪತ್:** [ವ್ಯಂಗ್ಯವಾಗಿ] ದಾಸಪ್ಪಾ ! ನಿನಗೆ ತಿಳಿಯದ ಮಾತೆ? ನಮ್ಮ ಶೋಭಾ ಎಂದಾದರೂ ಸುಳ್ಳು ಹೇಳಿದ್ದಾಳೆಯೇ? ಅಮ್ಮ ಅವಳನ್ನು ಹಾಗೆ ಬೆಳೆಸಿದ್ದಾಳೆ ! ನಾನು ಬಲ್ಲೆ. ಅದೆಂತಹ ಜೀವ ಹೋಗೋ ವಿಷಯ ಆದರೂ ಶೋಭಾ ಸುಳ್ಳು ಮಾತ್ರ ಹೇಳೋದಿಲ್ಲ. ಆದರೂ, ಅದೇನೋ, ಈ ದಿನ ಮಾತ್ರ ಈ ನಮ್ಮ ಶೋಭಾ—ಸತ್ಯಸಂಧೆ, ಮಹಾ ಸತ್ಯವತಿ—ಅಮೋಘವಾದ ಅಸತ್ಯವನ್ನು ಹೇಳಿದ್ದಾಳೆ. [ಶೋಭಾ ಕಡೆಗೆ ತಿರುಗಿ] ಏನಾಯ್ತು ? ಕಾರಣ ಹೇಳಮ್ಮಾ ! ಸೂರ್ಯ ಪಶ್ಚಿಮದಲ್ಲಿ ಮೂಡಿದನೇ ? ಸಪ್ತ ಸಮುದ್ರಗಳೂ ಒಂದಾಗಿಬಿಟ್ಟವೇ ? [ದಾಸಪ್ಪನ ಕಡೆ ತಿರುಗಿ] ಏನಪ್ಪಾ ದಾಸಣ್ಣ ! ನೀನಾದರೂ ಗೊತ್ತಿದ್ದರೆ ಹೇಳು, ಏನು ಕಾರಣ ಇರಬಹುದು ?

**ದಾಸಪ್ಪ:** ಆ ಅಮ್ಮ ಸುಳ್ಳು ಹೇಳಿದ್ದಾಳೆ ಅಂಬೋದೇ ನಾನರಿಯೆ.

**ಸಂಪತ್:** ಓಹೋ ! ನಿನಗೂ ಈ ದಿನ ಸತ್ಯ-ಅಸತ್ಯ ತಿಳಿಯದ ಹಾಗೆ ಆಗಿಬಿಟ್ಟಿದೆ ! ಇದೂ ಒಂದು ವಿಶೇಷವೇ ! ಅದೇನಪ್ಪಾ ! ಈದಿನ ಎಲ್ಲಾ ಹೀಗೆ ಆಶ್ಚರ್ಯಕರವಾಗಿದೆ !

**ದಾಸಪ್ಪ:** ನನಗೂ ಹಾಗೆಯೇ ತೋರುತ್ತೆ.

**ಶೋಭಾ:** ನಾನು ಹೇಳಿದ್ದರಲ್ಲಿ ಏನಣ್ಣಾ ಅಸತ್ಯ ?

**ಸಂಪತ್:** ನೀನು ಪಾರ್ಕಿಗೆ ಹೋದದ್ದು ಶುದ್ಧ **ಹಸೀ** ಸುಳ್ಳು ? ನಾನು ಈಗ ಅಲ್ಲಿಂದಲೇ ಬರ್‍ತಿದೇನೆ !

ದಾಸಪ್ಪ: ಅಷ್ಟು ಮಾತ್ರಕ್ಕೇನೇ ಅದು ಸುಳ್ಳಾಗಬೇಕೆ? ಆಕೆಯನ್ನು ನೀವು ನೋಡದೆ ಇರಬಹುದು.

ಸಂಪತ್: ಹೌದು, ಇದ್ದರೂ ಇರಬಹುದು. ಅದಿರಲಿ, ಕವಿ ಎಲ್ಲಿ? ಶೋಭಾ! ಕವಿ ಎಲ್ಲಿದ್ದಾರೆ?

ಶೋಭಾ: ಮನೇಲಿಲ್ವೆ?

ಸಂಪತ್: ಇಲ್ವಲ್ಲ! ಆತ ಕೂಡಾ ಈ ಹೊತ್ತು ಹೊರಗೆ ಹೋಗಿದ್ದಾನೆ! ಅಬ್ಬಬ್ಬ! ಈ ದಿನ ಹೊಸಲು ದಾಟಿ ಹೊರಗೆ ಹೋದದ್ದಕ್ಕೆ ಒಂದು ದೊಡ್ಡ ಔತಣಾನೇ ಮಾಡಿಸಬೇಕು! ಇಷ್ಟಾಗಿ— ಆತ ಎಲ್ಲಿ ಹೋದ?

ಶೋಭಾ: ಏನೋ! ಎಲ್ಲಿಗೆ ಹೋದರೋ!

ಸಂಪತ್: ಎಲ್ಲಿ ಹೋದರೂಂತಲೇ ನಿನ್ನ ಕೇಳಿದ್ದು.

ಶೋಭಾ: ನನಗೇನು ಗೊತ್ತು?

ಸಂಪತ್: ಊಂ! ಹೇಳು, ಕವಿ ಎಲ್ಲಿ ಹೋದ?

ಶೋಭಾ: ಇದೇನಣ್ಣಯ್ಯಾ? ಹೀಗೆ ಕೇಳುತ್ತೀ?

ಸಂಪತ್: [ಬಿರುಸಾಗಿ] ರಘು ಎಲ್ಲಿ ಹೋದ?

ಶೋಭಾ: ನನಗೇನು ಗೊತ್ತು?

ಸಂಪತ್: ನಿನಗೆ ಗೊತ್ತಿದೆ!

ಶೋಭಾ: ನನಗೆ ತಿಳೀದು!

ಸಂಪತ್: ತಿಳೀದೇ? [ದಾಸಪ್ಪನ ಕಡೆ ತಿರುಗಿ] ದಾಸಪ್ಪಾ! ಕವಿ ಎಲ್ಲಿ? ಎಲ್ಲಿಗೆ ಹೋದ?

ದಾಸಪ್ಪ: ಆತ ಎಂದೂ ಎಲ್ಲೂ ಹೋಗೋರಲ್ಲ. ಈ ಕೊಠಡಿ, ಈ ಪುಸ್ತಕಗಳು ನಿಮ್ಮನ್ನು ಬಿಟ್ಟು ಆತನಿಗೆ ಬೇರೆ ಏನೂ ತಿಳೀದು.

ಸಂಪತ್: ದಾಸಪ್ಪಾ! ನಿಜ ಹೇಳು!

ದಾಸಪ್ಪ: ಇಷ್ಟು ದಿನ ಬದುಕಿ ಬಾಳಿ, ಇದುವರೆಗೂ ಸುಳ್ಳು ಹೇಳದವನು ಈ ಮುಪ್ಪಿನಲ್ಲಿ ಸುಳ್ಳು ಹೇಳುತ್ತೇನೆಯೇ?

ಸಂಪತ್: [ಸಿಟ್ಟಿನಿಂದ] ಯಾರಿಗೂ ತಿಳೀದು! ಯಾರಿಗೂ ತಿಳೀವೆ

ಹೇಗೆ ಹೋದ ? ನೀವು ಇಷ್ಟು ಜನ ಮನೇಲಿದ್ದು ಏನು ಮಾಡಿಪ ಹಾಗಾಯ್ತು ?

**ದಾಸಪ್ಪ**: ದೊಡ್ಡ ಸಾವ್ಕಾರರ ಕಾಲದಿಂದ ಲೆಕ್ಕ ಬರೆಯೋ ಕೆಲಸ ಒಂದು ಮಾಡುತಾ ಇದ್ದೇನೆ. ಗುಮಾಸ್ತೆ ಎಂದರೆ ಬರುವ-ಹೋಗುವ ಮನುಷ್ಯರಿಗೆ ಕಾವಲು ಇರಬೇಕು—ಎಂತ ನನಗೆ ತಿಳೀದು !

**ಸಂಪತ್**: [ಸಿಟ್ಟಿನಿಂದ] ಷಟಪ್ ! [Shut up]

**ದಾಸಪ್ಪ**: ಸಾವ್‌ಕಾರ್ರೇ ! ಮಾತು ಜೋರು ಮಾಡಬೇಡಿ.... ಏನೋ ಎತ್ತಿ ಸಾಕಿದ ಅಭಿಮಾನದಿಂದ ಸುಮ್ಮನಿದ್ದೇನೆಯೇ ಹೊರತು ಕೇವಲ ದೊಡ್ಡಸ್ತಿಕೆಯಿಂದ ನೀವು ಹೀಗೆಲ್ಲಾ, ಇಂತಹ ಮಾತು ಗಳನ್ನಂದಿದ್ದರೆ....[**ದಾಸಪ್ಪ ಹೋಗುತ್ತಾನೆ.**]

[**ರಂಗನು ಬರುತ್ತಾನೆ.**]

**ಸಂಪತ್**: ರಂಗಾ ! ಕವಿಯೋರು ಬರಲಿಲ್ವೇನೋ ?

[**ಶೋಭಾ ರಂಗನಿಗೆ ಹೇಳಬೇಡವೆಂದು ಸನ್ನೆಮಾಡುತ್ತಾಳೆ.**]

**ರಂಗ**: ಇಲ್ಲಿ ಇಲ್ಲವೇನ್ರಿ ?

**ಸಂಪತ್**: ಊಟಕ್ಕೆ ಅವರು ಬರೋದಿಲ್ವೇನು ? ಅಲ್ಲೇ ಇರ್ತಾರೇನು?

**ರಂಗ**: ಏನೋ ಸಾರ್ !

**ಸಂಪತ್**: ನಿನಗೆ ಹೇಳಲಿಲ್ವೇನೋ ?

**ರಂಗ**: ನಂಗ್ಯಾಕೆ ಹೇಳ್ತಾರೆ?

**ಸಂಪತ್**: ಕೋ ! ಈ ಹತ್ತು ರೂಪಾಯಿ !

**ರಂಗ**: ಸಂಬಳ ಹನ್ನೆರಡು ಸಾವ್ಕಾರ್ರೆ ! ಇನ್ನೂ ಎರಡು ರೂಪಾಯಿ ಬರಬೇಕು.

**ಸಂಪತ್**: ಇದು ಸಂಬಳ ಅಲ್ಲವೋ! ನೀನೇ ಇಟ್ಕೊಕೋ! ಬಹುಮಾನ!

**ರಂಗ**: ಸಂಬಳಾ ಕೊಟ್ಟರೆ ಬಹುಮಾನ ಕೊಟ್ಟಷ್ಟು ಪುಣ್ಯ ಸಾವ್ಕಾರ್ರೆ !

**ಸಂಪತ್**: ಸಂಬಳಾ, ಬಹುಮಾನಾ, ಎಲ್ಲಾ ಕೋಡ್ತೇನೆ. ಕವಿ ಎಲ್ಲಿ ದ್ದಾರೆ ಹೇಳು ?

ರಂಗ: ಏನೋರೀ ! ಅವರು ಎಂದಾದರೂ ಹೊರಗೆ ಹೋಗೋರಾದರೆ ಇಂಥಾ ಕಡೆ ಹೋಗಿರಬಹುದು ಅಂತ ಹೇಳಬಹುದು. ಈಗ ನಾನು ಹ್ಯಾಗೆ ಹೇಳಲಿ ?

ಶೋಭಾ: ಲೈಬ್ರೆರಿ ಕಡೆ ಹೋಗಿದ್ದಾರೋ ಏನೋ !

ರಂಗ: ಹೌದ್ದು, ಹೌದು ! ಹೋಗಿರಬಹುದು.

ಸಂಪತ್: ವಾಹವ್ವಾ ! ಎಷ್ಟು ಚೆನ್ನಾಗಿ ಹೇಳ್ತೀಯೋ ಸುಳ್ಳು! [ಗಟ್ಟಿಯಾಗಿ ಕೇಳುತ್ತಾನೆ] ಹೂಂ ! ಹೇಳು ! ಎಲ್ಲಿದ್ದಾರೆ ?

ಶೋಭಾ: ಈ ಹೊತ್ತು ಸ್ಕೂಲಿನಲ್ಲಿ ಏನಾದರೂ ಮೀಟಿಂಗೀಟಿಂಗ್ ಇದೆಯೋ ಏನೋ !

ಸಂಪತ್: ಶೋಭಾ ! ನೀನು ಸುಮ್ಮನಿರು ! [ರಂಗನನ್ನು ಕುರಿತು] ನಿಜ ಹೇಳೋ ! ಎಲ್ಲಿದ್ದಾನೆ ಆತ ? ಅರೆ ! ಶೋಭಾ ಮುಖದಲ್ಲೇನಿದೆಯೊ ? ನಾನು ಕೇಳ್ತಾ ಇರೋದೇನು, ನೀನು ನೋಡೋದೆಲ್ಲಿ ? ಹೂಂ ! ಹೇಳು [ಗದರಿಸುತ್ತಾ] ಹೇಳ್ತಿಯೋ, ಇಲ್ಲವೋ ?

ರಂಗ: [ಅಂಜುತ್ತಾ] ನಮ್ಮನೇಗೆ ಬಂದಿದ್ರು.

ಶೋಭಾ: ನಿಮ್ಮನೇಗೆ ಬಂದರೆ ?

ಸಂಪತ್: ಹಾ ಹಾಂ ! ಬರದೇ ಏನು ? ಈಗೆಲ್ಲಿದ್ದಾರೆ ?

ರಂಗ: ಹರೀಂದ್ರರ ಕೂಡ ಬರ್‍ತಿದ್ದಾರೆ.

ಸಂಪತ್: ಅಲ್ಲಿಗೆ ಬಂದು ಏನು ಮಾಡಿದರು ?

ರಂಗ: ನಮ್ಮಪ್ಪನ್ನ ನೋಡಿದರು.

ಸಂಪತ್: ಇನ್ನು, ಆಮೇಲೆ ?

ರಂಗ: ನಮಗೊಂದು ಹಾಡು ಬರಕೊಟ್ರು.

ಶೋಭಾ: ಬರೆದುಕೊಟ್ಟರೆ ?!

ಸಂಪತ್: ಹೌದು ! ಬರೆದುಕೊಟ್ರು ! ಶೋಭಾ ಕೂಡಾ ಬಂದಿದ್ದಳು. ದಾಸಪ್ಪನೂ ಬಂದಿದ್ದ. ಹೌದೋ ?

ರಂಗ: ಹೌದ್ರಿ.

ಸಂಪತ್: ಹೌದು! ಎಲ್ಲರೂ ಕಳ್ಳರೇ ! ಎಲ್ಲರೂ ಮೋಸಗಾರರೇ ! ಎಲ್ಲರೂ **ನನ್ನು**ಪ್ಪು ತಿಂದು **ನನಗೇ** ಎರಡು ಬಗೀತಾರೆ ! ನನ್ನ

ಆಶ್ರಯದಲ್ಲಿ ಬದುಕಿ ನನಗೇ ದ್ರೋಹ ಮಾಡ್ತಾರೆ! ನನ್ನ ಕೊರಳು ಕೊಯ್ಯೋಕೆ ಪ್ರಯತ್ನಿಸ್ತಾರೆ! ದ್ರೋಹಿಗಳು! ಈ ನೀಚರನ್ನ ಮನೆ ಸೇರಿಸದಿದ್ರೆ ಮಾಡ್ತಾರೇನು?

ಶೋಭಾ: [ಸಿಟ್ಟಿನಿಂದ] ಅಣ್ಣಯ್ಯಾ!

ಸಂಪತ್: ಏನು? ಯಾಕೆ ಈ ರೋಷ? ಮಾಡಬೇಕಾದ್ದೆಲ್ಲಾ ಮಾಡಿಬಿಟ್ಟು ಇನ್ನೇಕೆ ಈ ರೋಷ?

ಶೋಭಾ: ಕೋಪಿಸಿಕೊಳ್ಳದೆ ಇರೋದಕ್ಕೆ ನಾನೇನೂ ಅಂಥ ನೀಚ ಕೆಲ್ಸ ಮಾಡಿಲ್ಲ.

ಸಂಪತ್: ಮಾಡಿಲ್ಲವೆ? ಇನ್ನೂ ಏನು ಮಾಡಬೇಕು? ಸಾಲದೆ? ಆ ಕೂಲಿಗಳ ಕೊಂಪೆಗೆ ಹೋಗಿ ಬಂದಿದ್ದಿಯಲ್ಲ! ಅಷ್ಟು ಸಾಲದೆ?

ಶೋಭಾ: ಹೌದು! ಹೋಗಿದ್ದೆ! ನನ್ನಿಷ್ಟ!

ಸಂಪತ್: ನಿನ್ನಿಷ್ಟ ಅಲ್ಲ, ತಿಳಿಯಿತೆ? ವಂಶಕ್ಕೆ ಹೆಸರು, ಪ್ರತಿಷ್ಠೆ ಅಂತ ಆದೆ! ನಿನ್ನಿಷ್ಟ ಬಂದಂತೆ ನೀನು ಹೋಗಲಾರೆ! ಹೋಗಲೂ-ಕೂಡದು! ನೀನ್ಯಾಕೆ ಹೋದೆ ಅಂಬೋದನ್ನ ನಾನು ಬಲ್ಲೆ. ಏನೋ ಮಹಾ ದಯಾಶೀಲಳು ಎಂತ ತೋರಿಸಿಕೊಳ್ಳೋಕೆ ಹೋಗಿದ್ದೆ! ಬೇರೊಬ್ಬ ಗಳಿಸಿ ಸುರೀತಿದ್ರೆ—ಎಲ್ಲರೂ ದಯಾಶೀಲರೇ! ನಿನ್ನ ಕಾರುಗಳೂ, ಷೋಕಿಗಳೂ, ದಾನಗಳೂ ಎಲ್ಲಿಂದ ಬರುತ್ತೆ ಅಂದುಕೊಂಡಿದ್ದೀ? ಆಕಾಶದಿಂದ ಉದುರಲಿಲ್ಲ. ನಿನ್ನ ಹಾಗೆಯೇ ನಾನೂ ಮಹಾದಯಾಶೀಲನಾಗಿರಬಹುದು! ಆ ಮಾರನೇ ದಿನವೇ, ನಿನ್ನ ಗತಿ ಏನಾಗುತ್ತೆ, ಗೊತ್ತೆ? ಹೋಗಿದ್ದಳಂತೆ! ತನ್ನಿಷ್ಟವಂತೆ! ಅಷ್ಟಲ್ದೆ!

ಶೋಭಾ: ಏನು ಇದೆಲ್ಲಾ ನನಗೋಸ್ಕರವೇ ಮಾಡ್ತಿದ್ದೀಯಾ?

ಸಂಪತ್: ಮತ್ತೆ! ನಿಮ್ಮನ್ನೆಲ್ಲಾ ಸಾಕೋದಕ್ಕಲ್ಲದಿದ್ರೆ ಇನ್ಯಾಕೆ? ನನ್ನೊಬ್ಬನ ತಲೆಯ ಮೇಲೆಯೇ ಹೊತ್ತುಕೊಂಡು ಹೋಗುತ್ತೇನೆಯೇ?....ಇಷ್ಟೂ ಮಾಡೋನು ಆ ಹರೀಂದ್ರ! ನಿನಗೆ ಬೋಧ್ನೆ ಮಾಡಿರೋನೂ ಅವನೇ! [ನಯವಾಗಿ] ಶೋಭಾ! ನಾವು ಎಷ್ಟು

ತಗ್ಗಿ ಅವರೊಡನೆ ಬೆರೆಯಬೇಕೆಂದು ಹೋದರೂ ಅವರು ನಮ್ಮನ್ನು ದೂರ ಇಡ್ತಾರೆ. ಅವರೂ-ನಾವೂ ಒಂದಾಗುವುದು ಎಂದಿಗೂ ಆಗದ ಮಾತು ! ನೀನು ಹುಚ್ಚು ಹುಚ್ಚಾಗಿ ಈ ಸಿದ್ಧಾಂತಗಳನ್ನು ನಂಬ ಬೇಡ ; ಅನುಸರಿಸಬೇಡ. ನಮಗೂ ಒಂದು ಶಕ್ತಿ ಇದೆ. ಆ ಶಕ್ತಿಗೆ ಅನುಗುಣವಾದ ವರ್ತನೆ ಇಲ್ಲದಿದ್ದರೆ ಲೋಕದ ಜನ ನಮ್ಮನ್ನು ನೋಡಿ ನಕ್ಕಾರು ! ನಿನ್ನ ಉದಾರ ಸ್ವಭಾವ ಅವರ ಮನಸ್ಸಿಗೆ ಬಂದೀತೆಂದು ತಿಳಕೊಂಡಿದ್ದೀಯಾ ? ಪ್ರಪಂಚವನ್ನೆಲ್ಲಾ ನೀನು ರಿಪೇರಿ ಮಾಡಲಾರೆ! ಆ ಹರೀಂದ್ರ ಕೊಟ್ಟರೋ ಪುಸ್ತಕಗಳನ್ನು ಓದಿ ನೀನು ಈ ಹುಚ್ಚಿನಲ್ಲಿ ಬೀಳುತ್ತಿದ್ದಿ. ಅಷ್ಟೆ !

**ಶೋಭಾ:** ಅಣ್ಣಯ್ಯ ! ಧನದಿಂದ ಹೊಂದಿದ ಈ ಶಕ್ತಿಯು ಕ್ಷಣಿಕ, ಹೃದಯಕ್ಕೆ ಹೊಂದಿಕೊಂಡಿರುವ ಮಾನವ ಧರ್ಮಗಳೇ ಶಾಶ್ವತ. ಆ ತತ್ವಗಳನ್ನು ಅನುಸರಿಸುವವರಿಗೆ ಎಂದಿಗೂ ಕೆಡುಕಾಗೋದಿಲ್ಲ. ಇಷ್ಟು ತಿಳಿದುಕೋ, ಅಣ್ಣಾ !

**ಸಂಪತ್:** ಹಾಗಾದರೆ ನಿನ್ನ ಹಠ ನೀನು ಬಿಡೋದಿಲ್ಲ ಅನ್ನು! ಈ ದ್ರೋಹ ಮಾಡ್ತಲೇ ಇರ್ತೇನೆ ಅಂತೀಯಾ ? ಇಷ್ಟು ದಿನ ನಿನ್ನ ಬೆಳೆಸಿ, ಸಾಕಿ, ಸಲಹಿದ್ದಕ್ಕೆ ಸಾರ್ಥಕವಾಯ್ತು! ಇವತ್ತು ನಿನಗೆ ಆ ಕೂಲಿಕಾರರೇ ಹೆಚ್ಚಾದರು-ಅಲ್ಲವೇ ? ಆ ಕವೀನ ಕೂಡ ನೀನೇ ಕರೆದುಕೊಂಡು ಹೋಗಿರಬೇಕು! ಕನಿಷ್ಠಪಕ್ಷ ಅಲ್ಲಿಗೆ ಹೋಗಿ ಅಂತಾದರೂ ಹೇಳಿರಬೇಕು. ಬರಲಿ, ಬರಲಿ, ಆ ಕವಿ ! ಅದೇನು ಸಮಾಚಾರವೋ ಅದೂ ತಿಳ್ಕೋತೇನೆ!

[ಕವಿ ಬರುತ್ತಾನೆ ]

**ಸಂಪತ್:** ಓ....ಹೋ! ಕವಿಗಳೇ ! ದಯಮಾಡಿಸಿ ! ಎಲ್ಲಿಗೆ ಹೋಗಿ ಬಿಟ್ಟಿದ್ರಿ ?

**ಕವಿ:** ಎಲ್ಲಿಗೋ ಹೋಗಿದ್ದೆ.

**ಸಂಪತ್:** ಹಾಗೋ ?! ನಿಮಗೇ ತಿಳೀದು ಅಂತಾಯ್ತು ! ಹೋಗಲಿ ಬಿಡಿ! ಆ 'ಸ್ಟೇಟ್‌ಮೆಂಟ್' ಬರೆದಿದ್ದೀರಾ ?

ಕವಿ: ಇಲ್ಲ.

ಸಂಪತ್: ಇಲ್ಲ ?! ಈಗಲೇ ಬರೆದಿಡಿ–ತುಂಬಾ ಅರ್ಜಂಟ್!

ಕವಿ: ನಾನು ಬರೆಯೋದಿಲ್ಲ.

ಸಂಪತ್: ಅಂದರೆ ?

ಕವಿ: ನನ್ನಿಂದಾಗದು.

ಸಂಪತ್: ನಿಮ್ಮಿಂದಾಗದೆ ?

ಕವಿ: ನನ್ನ ಅಂತರಾತ್ಮಕ್ಕೆ ವಿರೋಧವಾದ ಕೆಲಸ ನಾನು ಮಾಡುವುದಿಲ್ಲ!

ಸಂಪತ್: ಒಂದು ಗಂಟೆಗೆ ಮೊದಲು ಇಲ್ಲದ ಅಂತರಾತ್ಮ ಈಗ ಎಲ್ಲಿಂದ ಬಂತು ? ಆಕಾಶದಿಂದ ಉದುರಿತೆ ? ಅಥವಾ, ಹರೀಂದ್ರ ಅಂತರಾತ್ಮಗಳನ್ನು ತಯಾರಿಸಿ ಮಾರುತಾನೆಯೋ ?

ಕವಿ: ಗಂಟೆಗೆ ಮೊದಲೂ ನನ್ನಲ್ಲಿಯೇ ಇತ್ತು. ಅದು ಎಲ್ಲಿಂದಲೂ ಬರಲಿಲ್ಲ. ಆದರೆ ಇದುವರೆಗೂ ನನಗೆ ಅದು ತಿಳಿದಿರಲಿಲ್ಲ. ಈಗ ತಿಳಿದುಕೊಂಡೆ.

ಸಂಪತ್: ಏನೂಂತ ? ಅಂತರಾತ್ಮ ಇದೆಯೆಂತಲೇ ?

ಕವಿ: ನಿಮ್ಮದು ಅನ್ಯಾಯ, ದೌರ್ಜನ್ಯ–ಎಂತ!

ಸಂಪತ್: ಏನೆಂದೆ ?

ಕವಿ: [ಗಟ್ಟಿಯಾಗಿ] ನಿಮ್ಮದು ಅನ್ಯಾಯ, ದೌರ್ಜನ್ಯ !

ಸಂಪತ್: ಅನ್ಯಾಯವೇ ?! ಹೌದು! ಬೀದೀಲಿ ಭಿಕ್ಷವೆತ್ತಬೇಕಾಗಿದ್ದವನ ಮೇಲೆ ಕನಿಕರವಿಟ್ಟು, ಆಶ್ರಯ ಕೊಟ್ಟು, ಅನ್ನ ಹಾಕಿದ್ದು ಅನ್ಯಾಯ! ಸಾವಿಗೆ ಸಿಕ್ಕಿದ್ದವನನ್ನು ಕರೆತಂದು, ರಾಜಭೋಗಗಳಲ್ಲಿ ಸುಖವಾಗಿರಗೊಳಿಸಿದ್ದು ಅನ್ಯಾಯ ! ಉಡಲು ಬಟ್ಟೆಯಿಲ್ಲದೆ ಓಡಾಡುತ್ತಿದ್ದ ನಿನ್ನನ್ನು ನನ್ನ ಮನೆಗೆ ಕರೆತಂದು, ತಮ್ಮನಂತೆ ಬೆಳೆದು, ನನ್ನನ್ನೇ ಆರೋಪಿಸುವುದು ಮಾತ್ರ ಅನ್ಯಾಯವಲ್ಲ ! ನನಗೆ ದ್ರೋಹ ಮಾಡಬಯಸುವುದು ಅನ್ಯಾಯವಲ್ಲವೇ ಅಲ್ಲ !! ಛೀ ! ನಾಚಿಕೆಯಾಗೋದಿಲ್ವೆ ಮಾತಾಡೋಕೆ !

ಕವಿ: ಮುಚ್ಚು ಬಾಯಿ!

ಸಂಪತ್: ಆಂ!

ಕವಿ: ವಾಹವ್ವಾ! ಇದೆಂಥ ಜಿಪರಿಕೆ? ನೀನೇನೂ ನನ್ನನ್ನು ಸುಮ್ಮನೆ ಇಟ್ಟುಕೊಳ್ಳಲಿಲ್ಲ. ನನ್ನ ಕೈಲಿ ಲೇಖನ, ಉಪನ್ಯಾಸ ಗಳನ್ನು ಬರೆಸಿಕೊಂಡು, ಅವುಗಳಿಂದ ಹೆಸರು ಪ್ರತಿಷ್ಠೆ ಸಂಪಾದಿಸಿ ಕೊಂಡೆ! ನಿನ್ನ ಕೀರ್ತಿಯನ್ನು ಹೆಚ್ಚಿಸಿಕೊಳ್ಳಲು, ನಿನಗೆ ಬೇಕಾ ದಾಗಲೆಲ್ಲ, ನನ್ನನ್ನು ಉಪಯೋಗಿಸಿಕೊಂಡಿದ್ದಿ. ನನ್ನ ಲೇಖನಿಯ ಸಹಾಯದಿಂದ ಊರಿನ ದೊಡ್ಡ ದೊಡ್ಡ ಸ್ಥಾನಗಳನ್ನೆಲ್ಲಾ ಆಕ್ರಮಿ ಸಿಕೊಂಡಿದ್ದಿ! ಜನತೆಯನ್ನು ಸುಲಿದು ತಿನ್ನುತಿದ್ದಿ! ನನ್ನ ಬರಹಗ ಳನ್ನು ನಿನಗೆ ಮಾರಿದೆ! ಜನತೆಯನ್ನು ದೋಚಲು ನಿನಗೆ ಆಧಾರ ವಾಗಿ ನಿಂತೆ! ಒಂದು ಶಬ್ದ ಸರಿಯಾಗಿ ಮಾತನಾಡುವ ಯೋಗ್ಯತೆ ಯಿಲ್ಲ ನಿನಗೆ—ನನ್ನಿಂದ ಒಳ್ಳೆಯ ಭಾಷಣಕಾರನೆನಿಸಿಕೊಂಡಿದ್ದಿ! ನಾಚಿಕೆ ಯಾರಿಗೆ ಆಗಬೇಕು—ನನಗೋ, ನಿನಗೋ?! ಇನ್ನು ನಮಸ್ಕಾರ! [ಕವಿಯು ಹೊರಡಲನುವಾಗುತ್ತಾನೆ.]

ಸಂಪತ್: ಆಯಿತು! ಎಲ್ಲಿಗೆ ಹೊರಟೆ?

ಕವಿ: ಎಲ್ಲಿಗೋ! ನಿನಗ್ಯಾಕೆ?

ಸಂಪತ್: ನೀನು ಹೋಗುವಂತಿಲ್ಲ.

ಕವಿ: ಇದೇನು ಕಟ್ಟಪ್ಪಣೆಯೋ?

ಸಂಪತ್: ಹೌದು.

ಕವಿ: ನಾನು ನಿನ್ನ ಆಳಲ್ಲ. ತಿಳಿದಿರಲಿ! ಇದುವರೆಗೂ ನಿನ್ನ ಬಾಳಿನ ಗುಟ್ಟು ನಿನ್ನ ಮನೆಯವರ ಹೊರತು ಹೊರಗಿನವರಿಗೆ ಯಾರಿಗೂ ತಿಳಿಯದು. ಇನ್ನು ಅದನ್ನು ನಾಲ್ಕು ಜನರ ಮುಂದೆ ಬಯಲಿಗಿಡಬೇಡ. ನಿನ್ನನ್ನು-ನೀನು ಮಾಡಿದ್ದೆಲ್ಲವನ್ನೂ-ನಾನು ಇಷ್ಟರಲ್ಲಿಯೇ ಮರೆತುಹೋಗ್ತಿದ್ದೇನೆ. ನೀನೇನು ನನ್ನನ್ನು ಅನಾವ ಶ್ಯಕವಾಗಿ ಬೆಳೆಸಿಕೊಂಡಿದ್ದೀಯೋ? ಇನ್ನೂ ನಾಲ್ಕು ಜನರು ನಿನ್ನ ಮೋರೆ ಮೇಲೆ ಉಗುಳಲು ಅವಕಾಶ ಕಲ್ಪಿಸಿಕೊಡುತ್ತಿ, ಅಷ್ಟೆ!

**ಸಂಪತ್:** [ಗಟ್ಟಿಯಾಗಿ ಅರಚುತ್ತಾನೆ] ನೀನು ಇಲ್ಲಿಂದ ಹೊರಡಲಾರೆ!
ಕವಿ: [ಅಷ್ಟೇ ಗಟ್ಟಿಯಾಗಿ] ನೀನು ನನ್ನನ್ನು ತಡೆಯುವಂತಿಲ್ಲ!
**ಸಂಪತ್:** ಯಾಕಿಲ್ಲ? ನನಗೆ ಅಧಿಕಾರವಿದೆ! ನೀನು ಇಲ್ಲಿಂದ ಒಂದು ಹೆಜ್ಜೆ ಕೂಡ ತೆಗೆಯಲಾರೆ! ನಿನ್ನ **ಲೆಕ್ಕ** ತೀರಿಸಿ ಆ ಮೇಲೆ ಹೋಗು!
**ಕವಿ:** ಯಾವ ಲೆಕ್ಕ ?
**ಸಂಪತ್:** ಲೆಕ್ಕ ಯಾವುದೇ ?! ಇಷ್ಟು ದಿನ ನಿನಗಾಗಿ ಆದ ಖರ್ಚು! ಅದೇನು ನಿಮ್ಮಪ್ಪನ ಗಂಟೆಂದು ತಿಳಿದುಕೊಂಡಿದ್ದಿಯಾ? ಯಾರ ತಾತನ ಮನೇ ಗಂಟು ? ಏನೋ ಪುಸ್ತಕ ಗಿಸ್ತಕ ಬರೆದು ಮಾರಿ ತೀರಿಸುತ್ತಿ ಅಂತ ಕೊಟ್ಟಿನೇ ಹೊರತು ನಿನಗಿಂತಲೂ ಪುಣ್ಯಾತ್ಮ ರಾರೂ ಸಿಕ್ಕಲಿಲ್ಲವೆಂತ ನಿನಗೆ ಧಾರೆ ಎರೆದು ಕೊಡಲಿಲ್ಲ ! ಧರ್ಮದ ಊಟ ಹಾಕಿದ್ದೇನೆ—ಅಷ್ಟು ಸಾಲದೆ? ಆ ಸಾವಿರ ರೂಪಾಯಿ ತೀರಿಸಿಬಿಟ್ಟು—ಆ ಮೇಲೆ ಸ್ಥಳ ಬಿಟ್ಟು ಕದಲು !
**ಕವಿ:** [ಸಖೇದಾಶ್ಚರ್ಯದಿಂದ] ಸಾ-ವಿ-ರ ರೂಪಾಯಿ ?!
**ಸಂಪತ್:** ಹ ಹ್ಹ ಹ್ಹ ಹ್ಹ ಹ್ಹ ! ಸಾವಿರ ರೂಪಾಯಿ ! ಮರ್ಯಾದೆ ಯಿಂದ ತೀರಿಸಿ ಬಿಡು. ಇಲ್ಲವೆಂದರೆ ಈಗಲೇ ಪೋಲೀಸರನ್ನ ಕರೆ ಸ್ತೀನಿ. ನನಗೆ ಬೇಕಿದ್ದರೆ ಈಗ ನಿನ್ನನ್ನೇನು ಬೇಕಾದರೂ ಮಾಡ ಬಲ್ಲೆ ! ತಿಳಿಯಿತೇ ? ಹೊ-ರ-ಡು-ತ್ತೀ-ಯಾ ? ಎಲ್ಲಿಗೆ ಹೊರ ಡುತ್ತಿ ! ಯಾರ ಬಲ ನೋಡಿಕೊಂಡು ಹೊರಡುತ್ತಿ ? ಅವರೆಲ್ಲಾ ಈಗೆಲ್ಲಿದ್ದಾರೆ ? ಬಂದು ತೀರಿಸಬಾರದೆ ?! ಬರಲಿ, ಯಾವನು ಬಂದು ಏನು ಮಾಡುತ್ತಾನೋ ನೋಡೋಣ !

[ಕವಿ ಯೋಚಿಸುತ್ತಾ ನಿಲ್ಲುತ್ತಾನೆ. ಚನ್ನಯ್ಯ ಆಗ ತಾನೇ ಬರುತ್ತ —]

**ಚನ್ನಯ್ಯ:** ಸಾಕ್, ಸಾಕು ! ಏನ್ ಬಾಳ ದಬಾಯ್ಸಿದ್ದಿಯೇ ? ಪಾಪ, ಬಾಯಿಲ್-ದೋನಾತಾ ಅಂತ ದಬಾಯಿಸ್ತೀಯಾ ? ನಿಂಗೆ ಒಂದು ಸಾವಿರ ರೂಪಾಯ್ ಕೊಡಬೇಕೆ? ಕೊಡೋಣ ಕೊಡೋಣ! ಬಡವರ್ನ ದೋಚೀ ದೋಚೀ, ಅವ್ರೊಟ್ಟೆ ನ್ಯಾಲೊಡ್ದು ಸಂ-ಪಾ ದ್ಸಿ ಕಬ್ಬಿಣ್ದ ಪೆಟ್ಗೇಗ್ಳಲ್ಲಿ ಬಚ್ಚಿಟ್ಟು ಕೊಬ್ಬಿಕೊಂಡಿರೋ

ನಿಂಗೆ ಸಾವಿರ್ರೂಪಾಯಿ ಕೊಡ್‌ಬೇಕಾದ್ದೇ! ಕೊಡೋಣ, ಕೊಡೋಣ!

**ಸಂಪತ್:** ಏಯ್!

**ಚನ್ನಯ್ಯ:** ಏಯ್ ಅಂತೆ! ಏನ್ ನಿನ್ನ ಬೆದರ್ಕೆ? ಏನ್ ನೀನ್ ದಬಾಯ್ಸೋದು? ಏನ್ ಮಾಡ್‌ತೀಯು? ಪ್ರಾಣಾ ತೆಗೀತೀಯಾ? ಜೇಲಿಗ್ ಕಳಿಸ್‌ತೀಯಾ? ಅಷ್ಟೇ ತಾನೇ! ಓಗ್‌ತೇವೆ- ಬರ್‌ತೇವೆ! ಇಲ್ಲಿ ನಿಂಗಾಗಿ ಸಾಯೋ ಬದ್ಲು ನಮ್ ಹಕ್ಕಿಗಾಗಿ ಜಗಳಾ ಆಡಿ ಅಲ್ಲಾದ್ರೂ ಸಾಯ್‌ತೇವೆ!

**ಸಂಪತ್:** ಏಯ್! ಬೆಗರ್! ರ್‍ಯಾಸ್‌ಕಲ್!

**ಚನ್ನಯ್ಯ:** [ಕೈಯೆತ್ತಿ ಮುನ್ನುಗ್ಗುತ್ತಾ] ರಾಸ್‌ಕಲ್ಲಂತೀಯಾ?

**ಕವಿ:** [ಚನ್ನಯ್ಯನನ್ನ ಹಿಡಿದು ನಿಲ್ಲಿಸುತ್ತಾ] ಚನ್ನಯ್ಯಾ!

[ಚನ್ನಯ್ಯನು ಬಂಧಿಸಲ್ಪಟ್ಟ ಸಿಂಹದಂತೆ ವರ್ತಿಸುವನು.]

**ಕವಿ:** ನೀನು ಸುಮ್ಮನೇ ಇರು ಚನ್ನಯ್ಯಾ! ನಿನಗೆ ತಿಳೀದು. ನನ್ನ ಮಾತು ಕೇಳು.

**ಚನ್ನಯ್ಯ:** ಹಾಗಾದ್ರೆ ನಿಮ್ಮಿಷ್ಟ! [ಸುಮ್ಮನಾಗುವನು.]

**ಶೋಭಾ:** [ಕವಿಯನ್ನು ಕುರಿತು] ಹಾಗಾದರೆ ಕವಿಗಳೇ! ನೀವು ಖಂಡಿತ ಇಲ್ಲಿಂದ ಹೊರಡಬೇಕು ಎಂದು ಕೊಂಡಿದ್ದೀರಾ?

**ಕವಿ:** ಹೌದು! ಈ ನರಕದಲ್ಲಿ ಒಂದು ಕ್ಷಣವೂ ಇರಲಾರೆ.

**ಶೋಭಾ:** ಧನಿಕರ ಆಶ್ರಯವಿಲ್ಲದೆ ಹೋದರೆ ಮತ್ತೆ ಹೇಗೆ ಬದುಕುವಿರಿ?

**ಕವಿ:** ಜನತಾ ಸೇವೆಯಿಂದ ಬದುಕುವೆನು. ಜನ ಬಲವೆಲ್ಲಾ ನನ್ನದೇ!

**ಶೋಭಾ:** ಕವಿಗಳೇ! ಬೇಕಾಗಿದ್ದಷ್ಟು ಕಾಲ ಧನಿಕರನ್ನು ಆಶ್ರಯಿಸಿ, ಆ ಸಮಯದಲ್ಲಿ ಅವರ ಅನುಕೂಲಕ್ಕೆ ತಕ್ಕತೆ ಬರೆಯುತ್ತಿದ್ದು, ಅನಾವಶ್ಯಕವೆನಿಸಿದಾಗ, ಇನ್ನೊಂದು ಆಸರೆ ಸಿಕ್ಕಿದಾಗ, ಧನಿಕರನ್ನು ತಿರಸ್ಕರಿಸಿ ಅವರನ್ನು ಬೈದು ಹೋಗುವುದೇ ನಿಮ್ಮ ನೀತಿಯೇನು, ಹಾಗಾದರೆ?

**ಸಂಪತ್:** ದಟ್ಸ್ ರೈಟ್ [That's right] ಭೇಷ್ ! ಕೇಳು, ಕೇಳು. ಹಾಗೆಯೇ ಕೇಳು ! ಚೆನ್ನಾಗಿ ನಾಚಿಕೆಯಾಗುವಂತೆ ಕೇಳು.

**ಕವಿ:** ಶೋಭಾ ! [ವಿಷಣ್ಣವದನನಾಗಿ] ನೀನೂ ಹೀಗೆಯೇ ಮಾತನಾಡ್ತೀಯಾ ?

**ಶೋಭಾ:** ಹಾಗಾದ್ರೆ ಈಗೇನಂತೀರಿ ?

[ಕವಿಯು ನಿರುತ್ತರನಾಗುತ್ತಾನೆ. ಸ್ವಲ್ಪ ವೇಳೆ ನಿಶ್ಶಬ್ದ.]

**ಸಂಪತ್:** ಯಾಕೆ ಸುಮ್ಮನಿದ್ದೀ ? ಮಾತು ಹೊರಡದೇನು ? ಹೇಗೆ ಹೊರಟೀತು ?! ಹೊರಡುತ್ತಾನಂತೆ ! [ವಿಕಟ ಅಟ್ಟಹಾಸವನ್ನು ಪ್ರದರ್ಶಿಸುತ್ತಾ] ಹ ಹ್ಹ ಹ್ಹ ಹ್ಹ ಹ್ಹ ಹ್ಹ !!

[ದಾಸಪ್ಪ ಬರುತ್ತಾನೆ]

**ಶೋಭಾ:** ಅಣ್ಣಯ್ಯಾ !....

[ಸಂಪತ್ ಸುಮ್ಮನಿರುತ್ತಾನೆ] ಕವಿಯು ಹೊರಟುಹೋಗಲಿ.

**ಸಂಪತ್:** ಓಹೋ ! ಮಹಾರಾಯನಾಗಿ ಹೊರಟು ಹೋಗಲಿ, ನನ್ನ ಹಣ ತೆತ್ತು!

**ಶೋಭಾ:** ಅಣ್ಣಾ ! ನಾನು ಪುನಃ ಹೇಳ್ತೀನಿ. ಆತ ಹೊರಟು ಹೋಗಲಿ.

**ಸಂಪತ್:** ಹೋಗಕೂಡದು !

**ಶೋಭಾ:** ಮತ್ತೆ ನಾನು ಹೇಳ್ತೀನಿ. ಕಳಿಸ್ತೀಯೋ ? ಇಲ್ಲವೋ ?

**ಸಂಪತ್:** ಅದು ಸಾಧ್ಯವಿಲ್ಲ ಶೋಭಾ !

**ಶೋಭಾ:** ಅಣ್ಣಯ್ಯಾ! ನನ್ನ ಮಾತು ಕೇಳು. ನಿನಗೆ ನೀನೇ ತೊಂದರೆ ತಂದುಕೋಬೇಡ. ಕವಿಯು ಹೋಗಲಿ. ಕಳುಹಿಸಿಬಿಡು.

**ಸಂಪತ್** ನನ್ನನ್ನು ನೀನೇನೂ ಎಚರಿಸಬೇಕಾಗಿಲ್ಲ. ನನಗೂ ಬುದ್ಧಿ ಇದೆ. ನಾನೆಲ್ಲಾ ಬಲ್ಲೆ.

**ಶೋಭಾ:** ಅಷ್ಟೇನೇ ಹಾಗಾದರೆ ?

**ಸಂಪತ್:** ಹೌದು ! ಅಷ್ಟೆ.

**ಶೋಭಾ:** ಹಾಗಾದರೆ ಈಗಲೇ ಪೋಲೀಸರಿಗೆ 'ರಿಪೋರ್ಟ್' ಮಾಡಿ ಈ ಕ್ಷಣವೇ ನಿನ್ನನ್ನು ಪ್ರಾಸಿಕ್ಯೂಟ್ ಮಾಡಿಸಬಲ್ಲೆ! ಏನಂತಿ?

**ಸಂಪತ್:** ನಿನಗೆ ಬುದ್ಧಿಯಿಲ್ಲ, ಶೋಭಾ! ಹುಚ್ಚು ಹಿಡಿದಿದೆ, ಪ್ರಾಸಿಕ್ಯೂಟ್ ಮಾಡೋದು ನನ್ನನ್ನಲ್ಲ; ಈ ಕವಿಯನ್ನ. ಅವನ್ನ ದಾರೀಗೆ ತರಬೇಕಾಗಿದೆ!

**ಶೋಭಾ:** ಅಲ್ಲ, ಅಲ್ಲ! ನಿನ್ನನ್ನೇ! ಶ್ರೀಮಾನ್ ಧರ್ಮಪ್ರದೀಪರಾವ್ ಬಹದ್ದೂರ್ ಸಂಪತ್ ಕುಮಾರರನ್ನೇ!

**ಸಂಪತ್:** ಆಂ! ಏನೆಂದೆ ?!

**ಶೋಭಾ:** ಹೌದು. ನಿನ್ನನ್ನೇ! ನೀನು ಆತನು ಬರೆದ ಪುಸ್ತಕಗಳೆಲ್ಲವನ್ನೂ ನಿನ್ನ ಹೆಸರಿನಲ್ಲಿ ಅಚ್ಚು ಮಾಡಿಸಿದ್ದೀ! ನಿನ್ನ ಗುಟ್ಟು ರಟ್ಟು ಮಾಡುವುದು ನನ್ನ ಕೈಲಿದೆ. ಪಾಪ! ಆತನಿಗೆ ಈ ವಿಷಯ ಏನೂ ತಿಳೀದು! ಅವರ ಲೇಖನಗಳನ್ನೂ ಉಪನ್ಯಾಸಗಳನ್ನೂ ಉಪಯೋಗಿಸಿಕೊಳ್ಳುವುದೇ ನಾಚಿಕೆಗೇಡಿತನ! ಅದೂ ಸಾಲದೆ, ಅವರ ಪುಸ್ತಕಗಳನ್ನೂ ಸಹ ನಿನ್ನ ಹೆಸರಿನಲ್ಲಿ ಅಚ್ಚುಮಾಡಿಸಿದ್ದೀ! ಕಳ್ಳತನ ಮಾಡಿದ್ದೀ! ಆತನಿಗೆ ಮೋಸ ಮಾಡಿದ್ದೀ. ಏನಂತೀ? ಹೇಳು.

**ಕವಿ:** ಇದೆಲ್ಲವೂ ನಿಜವೆ ?

**ಸಂಪತ್:** ಎಲ್ಲಾ ಸುಳ್ಳು! ಶುದ್ಧ ಸುಳ್ಳು! [ಕೋಪದಿಂದ] ಶೋಭಾ!–

**ಶೋಭಾ:** ಇನ್ನೂ ಅದೇ ತಪ್ಪು ಮಾಡ್ತೀಯಾ? ಇನ್ನೂ ಹೆಚ್ಚು ಮೋಸಮಾಡುವ ಪ್ರಯತ್ನ ಮಾಡ್ತೀಯಾ? ಈ ಪರಿಸ್ಥಿತಿಯನ್ನು ಸ್ವತಃ ನೀನೇ ನಿನ್ನಿಂದಲೇ ತಂದುಕೊಂಡಿದ್ದೀ! ಈಗೇಕೆ ಈ ಕೋಪ? [ಅಡಗಿಸಿಟ್ಟಿದ್ದ ಪುಸ್ತಕಗಳನ್ನು ಹೊರತೆಗೆದು] ಇಗೋ! ಇವು ಅಚ್ಚಾಗಿರುವ ಪುಸ್ತಕಗಳು—ಇವು ಹಸ್ತ ಪ್ರತಿಗಳು! ಏನು? ಇವೆಲ್ಲಾ ಸುಳ್ಳೇ ?!

ಸಂಪತ್: [ಸ್ವಲ್ಪ ಹೊತ್ತು ಸುಮ್ಮನಿದ್ದು, ತರುವಾಯ] ..........ಹೊರಡಿ! ಹೊರಡಿ! ಎಲ್ಲರೂ ಹೊರಡಿ! ತಕ್ಷಣ ಹೊರಡಿ! ನೀನೂ ಹೋಗು! ನೀನೂ-ನೀನೂ! ಎಲ್ಲರೂ ಹೊರಡಿ! 'ಫಸ್ಟ್ ಅಫ್ ಆಲ್ **ಯು** ಗೆಟ್ ಔಟ್!" [First of all you get out!] [ಎನ್ನುತ್ತಾ ತಾನೇ ಹೊರಗೆ ಹೊರಟು ಹೋಗುವನು.]

ಕವಿ: ಶೋಭಾ! ಈಗ ತಿಳಿಯಿತು, ನಿನ್ನ ಯೋಗ್ಯತೆ!

ದಾಸಪ್ಪ: ನಾನು ಹೇಳಲ್ಲವೇ ಮೊದಲೇ! ಎಲ್ಲಾ ಅವರ ತಾಯಿಯವರದೇ ಹೋಲಿಕೆ!

ರಂಗ: [ಮೇಲೆ ನೋಡುತ್ತಾ] ನಾನೂನು ಹೇಳಲ್‌ವೇ? ಸೋಬಮ್ಮಾ ತುಂಬಾ ಒಳ್ಳೇವ್ರೋರು ಅಂತ!

ಶೋಭಾ: ಏನೋ ರಂಗಾ? ಯಾಕೆ? ಮೇಲೆ ಏನು ನೋಡ್ತಾ ಇದ್ದೀಯ ಹಾಗೆ?

ರಂಗ: ಅಲ್ಲಾ! ಇಲ್ಲಿ ಇಷ್ಟೊಂದು ಕೂಗಾಟ, ಒದರಾಟ ಆಗುತಾ ಇದ್ರೆ ಮೇಲಿನ್ ಛಾವಣೀ ಇನ್ನೂ ಹಾಗೇ ನಿಂತಿದೆಯೋ ಅಂತ!

ಶೋಭಾ: ಇವೆಲ್ಲಕ್ಕೂ ಕಾರಣ ರಂಗನ ಹಾಡುಗಳೇ! ನನ್ನಲ್ಲಿ ಇಷ್ಟೊಂದು ಬದಲಾವಣೆಯಾದದ್ದೂ ಆ ಹಾಡುಗಳಿಂದಲೇ! ಎಲ್ಲಿ, ರಂಗಾ! ಆ ಹಾಡು ಹೇಳು.

ರಂಗ: [ಮುಂದೆ ಬಂದು] "ಸಾಕು ನಿಲ್ಲಿಸು! ನಿನಗೇ ಅಲ್ವೆ ಹೇಳಿದ್ದು? ಕಿವಿ 'ಗಿರೋ' ಅಂತ ಗಡಚಿಕ್ಕುತ್ತೆ" ಅಂತ ಕವಿಗಳು ಸಿಡಿದು ಬೀಳ್‌ತಾರೋ ಏನೋ!

ಶೋಭಾ: ಪರವಾ ಇಲ್ಲ. ನೀನು ಹಾಡು!

ರಂಗ: [ಕವಿಯ ಕಡೆ ತಿರುಗಿ] ಹಾಡು ಅಂತ ಹೇಳಿ ಆಮೇಲೆ 'ಹಾಳ್ಹಾಡು' ಅನ್ನೋ ಹಾಗಿದ್ರೆ ನಾನೊಪ್ಪೋದಿಲ್ಲ—ಹಾಡೋದೇ ಇಲ್ಲ!

ಕವಿ: ಛೆ! ಛೇ! ಇಲ್ಲ, ನೀನು ಹಾಡು.

ರಂಗ: [ಹಾಡುತ್ತಾನೆ:]

ಪೇಳಿಲ್ರೈ ಬಡ ಜನರ ಗೋಳನ್ನು ತಿಳಿವಂತೆ
ಬರೆಯಿಲ್ರೈ ಉಳ್ಳವರು ನಡುಗಿ ಪೋಪಂತೆ
ಗುಡಿಸಿಲಲಿ ಚಂದಿರನ ಸೃಷ್ಟಿಸಯ್ಯಾ
ಕವಿತೆ ಜಡಿ ಮಳೆಯ ನೀ ವೃಷ್ಟಿಸಯ್ಯಾ !
ಕವಿ ಪುಂಗವಾ ! ಕವಿ ಪುಂಗವಾ !

[ರಂಗನು ಹಾಡುತ್ತಾ ಹೋಗುತ್ತಾನೆ. ಕವಿ, ಶೋಭಾ, ಚನ್ನಯ್ಯ, ಹಿ ಬಾಲಿ
ಸುತ್ತಾರೆ. ದಾಸಪ್ಪ ಮುಗುಳು ನಗೆ ಬೀರುತ್ತಾನೆ.]

[ಅಂಕದ ಪರದೆ]



## ನಮ್ಮ ಪ್ರಕಟಣೆಗಳು

★ **ರಕ್ತಾಂಜಲಿ**

ಜೆಕೊಸ್ಲೊವಾಕಿಯಾದ ಮಹಾಸಾಹಿತಿ
**ಜೂಲಿಯಸ್ ಫೂಚಿಕ್** ಅವರ
ಅಂತಿಮ ಕೃತಿ.

**ಬೆಲೆ: ರೂ. ೧-೮-೦**

★ **ನಮ್ಮ ನಡುವಿನ ಗೋಡೆ**

ಕನ್ನಡ ನಾಡಿನ ಪ್ರಗತಿಶೀಲ ಲೇಖಕರ
ಸಣ್ಣ ಕತೆಗಳ ಸಂಗ್ರಹ.

**ಬೆಲೆ: ರೂ. ೧-೨-೦**

★ **ಜಾಕ್ ಲಂಡನ್**

ಅಮೆರಿಕದ ಪ್ರಮುಖ ಪ್ರಗತಿಶೀಲ
ಸಾಹಿತಿಯಾಗಿದ್ದ **ಜಾಕ್ ಲಂಡನ್**ರ
ಜೀವನ ಮತ್ತು ಕೃತಿ ಪರಿಚಯ.

**ಬೆಲೆ: ರೂ. ೧-೪-೦**

ಪ್ರಕಾಶಕರು:

**ಪುರೋಗಾಮಿ ಪ್ರಕಾಶನ**

**ಬಸವನಗುಡಿ - - - ಬೆಂಗಳೂರು ೪**

Publishers & Advertisers Ltd., Chamarajpet, Bangalore 2.